ತತ್ತ್ವವಾದ ಪ್ರಕಾಶನ ಮಾಲಾ—ಪಂಚಮ ಕುಸುಮ

# ಶ್ರೀ ಹರೇ ವೇಂಕಟ

(ತಿರುಪತಿ ಶ್ರೀನಿವಾಸದೇವರ ಮೇಲಿನ ದೇವರನಾಮಗಳು)

ಸಂಗ್ರಹ ಪಂ ಹಯವದನಪುರಾಣೀಕರು

ಸಂಪಾದಕರು . ಡಾ॥ ಭಾರತೀರಮಣಾಚಾರ್ಯ

ತತ್ತ್ವವಾದ ಮಾಸಿಕ
ಅಖಿಲ ಭಾರತ ಮಾಧ್ವ ಮಹಾಮಂಡಳ
ಪೂರ್ಣಪ್ರಜ್ಞನಗರ ಕತ್ತ್ರಿಗುಪ್ಪೆ ರಸ್ತೆ
ಬೆಂಗಳೂರು – 28

# ಶ್ರೀ ಹರೇ ವೇಂಕಟ

(ತಿರುಪತಿ ಶ್ರೀನಿವಾಸದೇವರ ಮೇಲಿನ ದೇವರನಾಮಗಳು)

ಸಂಗ್ರಹ ಮತ್ತು ವ್ಯಾಖ್ಯೆ
ಪಂ ಹಯವದನಪುರಾಣೀಕರು

ಸಂಪಾದಕರು ಡಾ || ಭಾರತೀರಮಣಾಚಾರ್ಯರ್

ತತ್ವವಾದ ಮಾಸಿಕ
ಅಖಿಲ ಭಾರತ ಮಾಧ್ವ ಮಹಾಮಂಡಳ
ಪೂರ್ಣಪ್ರಜ್ಞನಗರ ಕತ್ತರಿಗುಪ್ಪೆ ರಸ್ತೆ ಬೆಂಗಳೂರು – 23

ಪ್ರಥಮ ಮುದ್ರಣ ೧೯೮೪

ಪ್ರತಿಗಳು 2000



ಬೆಲೆ . ರೂ 3-00

ಪ್ರಕಾಶನ

ತತ್ತ್ವವಾದ ಮಾಸಿಕ
ಅಖಿಲ ಭಾರತ ಮಾಧ್ವಮಹಾಮಂಡಳ
ಪೂರ್ಣಪ್ರಜ್ಞ ನಗರ, ಬೆಂಗಳೂರು-28

ಮುದ್ರಕರು—

ಶ್ರೀಸುಧಾ ಪ್ರಿಂಟರ್ಸ್
20, ಪಂಪಮಹಾಕವಿ ರಸ್ತೆ
ಉತ್ತರಾದಿಮಠ ಕಾಂಪೌಂಡ್
ಬೆಂಗಳೂರು-4

# ಸಂಪಾದಕನ ಮಾತು

ದಾಸ ವ್ಯಾಸ ಸಾಹಿತ್ಯಗಳೆರಡರಲ್ಲೂ ಪ್ರಭುತ್ವ ಸಾಧಿಸಿರುವ ಮಧ್ವಶಾಸ್ತ್ರ ಸಂಪನ್ನರಾದ ಹಯವದನ ಪುರಾಣೀಕರು ಆಯ್ದು ನೂರು ದೇವರ ನಾಮಗಳನ್ನು ಮತ್ತು ಒಂದು ಸೂಳಾದಿಯನ್ನು ತೆಗೆದುಕೊಂಡು ಹೊಸ ರೀತಿಯಲ್ಲಿ ವ್ಯಾಖ್ಯಾನ ಮಾಡಿ ಕೊಟ್ಟಿದ್ದಾರೆ. ಈ ಶ್ರಿ ಹರೇ ವೇಂಕಟ ಎಂಬ ಕಿರು ಹೊತ್ತಿಗೆಯಲ್ಲಿ. ದೇವರ ನಾಮುಗಳು ಸಂಗೀತ ಸಾಹಿತ್ಯಪ್ರಧಾನ ಭಕ್ತಿರಸಮಯ ಕೃತಿಗಳು ಸೂಳಾದಿ ತಾಳ ಲಯ ಪ್ರಧಾನವಾದ ಕೃತಿ ಪರಮಾತ್ಮನ ಈ ನೃತ್ಯಾದಿ ಸಮಸ್ತ ಲೀಲೆಯೂ ಸಹ ತಾಳಲಯ ಬದ್ಧವಾಗಿಯೇ ನಡೆಯುತ್ತಿರುವುದರಿಂದ ಸೂಳಾದಿಗಳ ರಚನೆಯೂ ಭಗವದುಪಾಸನೆಯೇ ಇದು ನಿಜಕ್ಕೂ ದಾಸ ಸಾಹಿತ್ಯದ ಗಂಭೀರತೆಯನ್ನು ತೋರುವುದು ಮಾತ್ರವಲ್ಲ ವ್ಯಾಸ ದಾಸ ಸಾಹಿತ್ಯಗಳ ಸರಸ ಸಮನ್ವಯವೇ "ಭಕ್ತನ" ಹೃದಯಾಂತರಾಳದಿಂದ ಸ್ಫುರಿಸುವ ಸತ್ಯವೆಂಬುದನ್ನೂ ತೋರಿಸುತ್ತದೆ

ಶ್ರೀಪಾದರಾಯರು ಮತ್ತು ವಾದಿರಾಜರು—ಇವರ ಕೃತಿಗಳನ್ನು ಸಂಗ್ರಹಿಸಿ ವ್ಯಾಖ್ಯಾನ ಬರೆದುಕೊಟ್ಟ ಶ್ರಿ ಹಯವದನ ಪುರಾಣೀಕರಿಗೂ ಮತ್ತು ಮುದ್ರಿಸಿರುವ ಶ್ರಿ ಸುಧಾ ಮುದ್ರಣಾಲಯದ ಮಾಲೀಕರಿಗೂ ಕೃತಜ್ಞರು

ಓದುಗರು ಇದನ್ನು ಸ್ವಾಗತಿಸುವರೆಂದು ನಂಬಿದ್ದೇವೆ.

12-8-84
ಬೆಂಗಳೂರು-28

ಭಾರತೀರಮಣಾಚಾರ್ಯ
ಸಂಪಾದಕ
ತತ್ವವಾದ

# ಪ್ರಕಾಶಕರ ನುಡಿ

ತತ್ವವಾದ ಬಹು ಮಂದಿ ಓದುಗರ ಅಪೇಕ್ಷೆಯಂತೆ ಕಿರು ಹೊತ್ತಿಗೆಗಳನ್ನು ಹೊರತರುವ ಸಾಹಸಕ್ಕೆ ಕೈ ಹಾಕಿರುವು ದೆಂದು ತಿಳಿಸಲು ಹರ್ಷವಾಗುತ್ತದೆ.

ತತ್ವವಾದದ ಸಂರಕ್ಷಕರೂ, ಮಹಾಪೋಷಕರೂ ಆದ ಶ್ರೀ ಪೇಜಾವರ ಮಠಾಧೀಶರಾದ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಅಪ್ಪಣೆ ಪಡೆದು ಕನ್ನಡ ಹಾಗೂ ಆಂಗ್ಲಭಾಷೆಯಲ್ಲಿ ಕೆಲವು ಪುಸ್ತಕಗಳನ್ನು ಪ್ರಕಟಿಸುತ್ತೇವೆ

ಈ ಹೊತ್ತಿಗೆಗಳು ಸಾಮಾನ್ಯ ಓದುಗರಿಗಾಗಿ ಇದ್ದುದರಿಂದ, ನಮ್ಮ ಆಶ್ರಯದಾತರು ಇವನ್ನು ಹೆಚ್ಚು ಪ್ರೋತ್ಸಾಹಿಸುತ್ತಾರೆಂದು ಭಾವಿಸಿದ್ದೇವೆ.

ಒಬ್ಬ ಅಂತರಂಗ ಭಕ್ತರು ಮೂರು ಸಹಸ್ರ ರೂಪಾಯಿಗಳನ್ನು ಮೇಲ್ಕಂಡ ಉದ್ದೇಶಕ್ಕಾಗಿ ದಾನಮಾಡಿದ್ದಾರೆಂದೂ ಅದರಿಂದ ನಿರಂತರ ಈ ಪುಸ್ತಕಮಾಲಿಕೆಯಲ್ಲಿ ಕುಸುಮಗಳು ಅರಳುವುವೆಂದೂ ತಿಳಿಸಲಿಚ್ಛಿಸುತ್ತೇವೆ ಇದೇ ರೀತಿ ಇನ್ನೂ ಅನೇಕ ಮಂದಿ ದಾತೃಗಳು ಮುಂದೆ ಬಂದು ನೆರವು ನೀಡಬೇಕೆಂದು ವಿನಂತಿಸಿ ಕೊಳ್ಳುತ್ತೇವೆ

ಪುಸ್ತಕದ ಮಾರಾಟದಿಂದ ಬಂದ ಲಾಭಾಂಶವನ್ನು ಮೂಲಧನವಾಗಿಟ್ಟು, ಅಸಲನ್ನು ಮುಂದಿನ ಪುಸ್ತಕ ಪ್ರಕಟಣೆಗಳಿಗೆ ಉಪಯೋಗಿಸಲಾಗುತ್ತದೆ

ಈ ಜ್ಞಾನಪ್ರಸಾರ ಕಾರ್ಯಕ್ಕೆ ಸಹೃದಯರ ಪ್ರೋತ್ಸಾಹವನ್ನು ನಿರೀಕ್ಷಿಸುತ್ತಿದ್ದೇವೆ

ಬೆಂಗಳೂರು–28 | ಎನ್ ಕೃಷ್ಣಸ್ವಾಮಿ

ದಿನಾಂಕ 12-8-84 | ಕಾರ್ಯದರ್ಶಿ––ಪ್ರಕಾಶಕ

# ವಿಷಯಸೂಚೀ

ರಾಗ : ನಾದನಾಮಕ್ರಿಯೆ, ಏಕತಾಳ

ವರ ವೇಂಕಟ ಶೈಲ ವಲ್ಲಭ ಪಾಲಿಸೊ ನೀ ಎನ್ನ ॥ ಪ ॥
ದುರಿತದೂರ ನೀನಲ್ಲದೆ ಧರೆಯೊಳು ದೊರೆಗಳ ಕಾಣೆ ನಿನ್ನಾಣೆ
॥ ಅನು ಪ. ॥

ಆರು ನಿನ್ನ ಹೊರತೆನ್ನ ಪೊರೆವರು ನೀರಜಾಕ್ಷ ಹರಿಯೆ । ಅ-
ಪಾರಮಹಿಮ ಪುರಾಣ ಪುರುಷ ಘೋರ ದುರಿತಗಳ ದೂರ
ಮಾಡಿಸೋ ॥ ೧ ॥

ಇಂದಿರೇಶ ಅರವಿಂದನಯನ ಎನ್ನ ತಂದೆ ತಾಯಿ ನೀನೆ ।
ಹೊಂದಿದವರಘವೃಂದ ಕಳೆವ ಮಂದರಾದ್ರಿಧರನೆ ಶ್ರೀಧರನೆ ॥ ೨ ॥

ಮಂಗಳಾಂಗ ಮಹನೀಯ ಗುಣಾರ್ಣವ ಗಂಗೋದಿತಪಾದ ।
ಅಂಗಜಪಿತ ಅಹಿರಾಜಶಯ್ಯ ಶ್ರೀರಂಗ ವಿಟ್ಠಲ ದೊರೆಯೆ
ಶ್ರೀಹರಿಯೆ ॥ ೩ ॥

(ಈ ದೇವರ ನಾಮವನ್ನು ಧನ್ಯಾಸಿ, ಅಟ್ಟತಾಳದಲ್ಲೂ ಹಾಡಬಹುದು)

ಶ್ರೀ **ಶ್ರೀಪಾದರಾಜರು** ತಮ್ಮ ಈ ಕೀರ್ತನೆಯಲ್ಲಿ ತಿರುಪತಿಯ ಶ್ರೀನಿವಾಸನನ್ನು ಶರಣುಹೊಂದುತ್ತಿದ್ದಾರೆ—

## ಶ್ರೀ ಹರಿ, ನೀ ಎನ್ನ ಪಾಲಿಸು

ನಾನಿರುವುದೆ ನಿನ್ನಿಂದಾಗಿ. ನನ್ನ ಅಸ್ತಿತ್ವ ನಿನ್ನ ಅಧೀನ. ಆತ್ಮಸ್ವರೂಪವು ಅಜರಾಮರವಾಗಿದ್ದರೂ ಅದಕ್ಕೆ ಆ ಅಜರಾಮರತ್ವ ಇರುವುದು ನಿನ್ನ ಅಧೀನ. ನೀನು ಬೇಡ ಎಂದರೆ ಅದಿಲ್ಲ.

'ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ।
ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥'
ಆದ್ದರಿಂದ ನೀನೇ ಎನ್ನ ಪಾಲಿಸಬೇಕು.

ಆತ್ಮಸ್ವರೂಪ ಅಜರಾಮರವಾಗಿರುವಂತೆ ಸಚ್ಚಿದಾನಂದ ಮಯವೂ ಆಗಿರುತ್ತದೆ, ನಿನ್ನಂತೆಯೆ. ನಿನ್ನ ನೆರಳಿನಂತೆ ಇವೆ. ನಮ್ಮೆಲ್ಲ ಆತ್ಮಗಳು. ನೀನು ಚಲಿಸಿದರೆ ನಾವು ಚಲಿಸುತ್ತೇವೆ, ನೀ ನಿಂತರೆ ನಾವು ನಿಲ್ಲುತ್ತೇವೆ.

'ರೂಪಂ ರೂಪಂ ಪ್ರತಿರೂಪೋ ಬಭೂವ'
ಹೀಗೆ ನಿನ್ನ ಪ್ರತಿಬಿಂಬಗಳಂತಿರುವ ನಮ್ಮನ್ನು ಪಾಲಿಸುವವ ನೀನಲ್ಲದಿನ್ನಾರು?

ಶ್ರೀಹರಿ, ನಾವು ನಿನ್ನಂತೆ ನಿಜರೂಪದಲ್ಲಿ ಅಜರಾಮರ ರಾಗಿದ್ದರೆ ಸಾಕೆ? ಸಂಸಾರದಲ್ಲಿ, ಜನನ ಮರಣಗಳ ಚಕ್ರದಡಿ ಯಲ್ಲಿ ಸಿಲುಕಿ ನುಚ್ಚು ನೂರಾಗುತ್ತಿದ್ದೇವೆ. ಬಾಳಿನುದ್ದಕ್ಕೂ ಹೀಗೆ ಅಳುತ್ತಲೆ ಇರುವಂತಾದರೆ ಆತ್ಮನ ಅಜರಾಮರತ್ವವು ಒಂದು ಶಾಪವೆ ಆಗುತ್ತದೆ. ಸಾವು ಬರಲಾರದು ಎಂದೆ ಬದುಕಿದ್ದರೆ ಅದು ಎಂಥ ವಿಪರ್ಯಾಸ! ಮಾನವನ ಹುಟ್ಟುಸಾವುಗಳ ನಡುವಿನ ಎರಡು ದಿನದ ಬಾಳಿನಲ್ಲಿ ಅದೆಷ್ಟು ಸಂಕಟಗಳು. ಕಾರಡವಿಯೊಳಗೆ ಹೆಬ್ಬುಲಿಗೆ ಹೆದರಿ ಓಡಿ, ಹಾಳುಬಾವಿಗೆ ಬಿದ್ದರೆ ದಂಡೆಯ ಒಂದು ಮರದ ಬೇರು ಕೈಗೆ ಸಿಕ್ಕಿದೆ! ಕೆಳಗೆ ಬುಸುಗುಟ್ಟುವ ಘಟಸರ್ಪ! ಮೇಲೆ ಬಾಯಿತೆರೆದು ನಿಂತ ಹೆಬ್ಬುಲಿ! ಶ್ರೀಹರಿ,

'ಏತಿ ಜೀವಂತಮಾನಂದೋ ನರಂ ವರ್ಷ ಶತಾದಪಿ'
ಎಂದು ನಂಬಿ ಜೀವ ಕೈಯಲ್ಲಿ ಹಿಡಿದು ನಿಂತಿದ್ದಾನೆ, ಮಾನವ.

ಆನಂದ? ಓಹ್? ಮರದ ಮೇಲಿನ ಜೇನುಗೂಡಿನಿಂದ ಒಂದೆರಡು ಜೇನ ಹನಿ ಆಗೊಮ್ಮೆ ಈಗೊಮ್ಮೆ ಕೆಳಗೆ ಬೀಳುತ್ತಿವೆ. ದೈವಾತ್ ಅವು ನಾಲಿಗೆಗೆ ತಗುಲಿದರೆ, ಕ್ಷಣಕಾಲ ಆನಂದ! ಎಲ್ಲ ಭ್ರಮೆ! ಜೀವನದಲ್ಲಿಯೂ ಸುಖವಿಲ್ಲ, ಮರಣದಲ್ಲಿಯೂ ಸುಖವಿಲ್ಲ.

'ನಾಭಿನಂದೇತ ಮರಣಂ ನಾಭಿನಂದೇತ ಜೀವಿತಂ
ಕಾಲಮೇವ ಪ್ರತೀಕ್ಷೇತ ...॥'

ಇದಕ್ಕೆಲ್ಲ ಕಾರಣ, ಪ್ರಾರಬ್ಧ ಕರ್ಮ. ಯಾರಿಗೆ ಯಾರೂ ಸುಖದುಃಖಗಳನ್ನು ಕೊಡಲಾರರು.

'ಹಸತಾ ಕ್ರಿಯತೇ ಕರ್ಮ ರುದತಾ ಪರಿಭುಜ್ಯತೇ'

ನಗುನಗುತ್ತ ಹೀನಕರ್ಮ ಮಾಡುವವನು ಅಳುತ್ತಲೆ ಅದನ್ನು ಅನುಭವಿಸಬೇಕು. ಆದರೆ, ಶ್ರೀಹರಿ, ನೀನೊಲಿದರೆ ಬೆಟ್ಟದಂಥ ಪಾಪರಾಶಿಯೂ ಪರಿಹಾರವಾಗುತ್ತದೆ. ನಿನ್ನ ನಾಮಕ್ಕೇ ಅಂಥ ಸಾಮರ್ಥ್ಯವಿದೆ. ನಿನ್ನ ನಾಮವು ಪರಿಹರಿಸಬಹುದಾದಷ್ಟು ಪಾಪವನ್ನು ಯಾವ ಪಾಪಿಯೂ ಮಾಡಲು ಶಕ್ತನಲ್ಲ ಎನ್ನುತ್ತಾರೆ

'ನಾಮ್ನೋಽಸ್ತಿ ಯಾವತೀ ಶಕ್ತಿಃ ಪಾಪನಿರ್ಹರಣೇ ಹರೇಃ।
ತಾವತ್ಕರ್ತುಂ ನ ಶಕ್ನೋತಿ ಪಾತಕಂ ಪಾತಕೀ ಜನಃ॥'

ಏಕೆಂದರೆ ಪಾಪವೆಂಬ ಬೆಟ್ಟದ ಮೇಲೆ ಹರಿನಾಮವು ಸಿಡಿಲಿನಂತೆ ಎರಗುತ್ತದೆ.

## 4

'ಹರಿನಾಮ ಮಹಾವಜ್ರಂ ಪಾಪ ಪರ್ವತದಾರಣೇ' ಆದ್ದರಿಂದ ಹರಿನಾಮಕ್ಕೆ ಹರಿಯದ ಪಾಪ ಧರೆಯೊಳಗಿಲ್ಲ ಎಂಬ ವಿಶ್ವಾಸದಿಂದ, ಶ್ರೀಹರಿ, ಎನ್ನ ನೀನು ಪಾಲಿಸೆಂದು ಬೇಡುತ್ತೇನೆ. ನೀನು 'ಹರಿ' ಎಂದೆನಿಸಿರುವುದಾದರೂ ಹೇಗೆ? ಪಾಪ ಪರಿಹರಿಸುವುದರಿಂದ ತಾನೆ! ಈ ಸತ್ಯವು ನನಗೆ ತಿಳಿದು ಬಂದಿರುವುದೆ ಒಂದು ದೊಡ್ಡ ಭಾಗ್ಯ. ಇದು ಎಲ್ಲರಿಗೂ ದೊರಕುವುದಿಲ್ಲ. ಆದ್ದರಿಂದ ಹೆಮ್ಮೆಯಿಂದ, ಆತ್ಮವಿಶ್ವಾಸದಿಂದ, ದೃಢ ಭಾವದಿಂದ ಬೇಡುತ್ತೇನೆ 'ಹರಿ, ನೀ ಎನ್ನ ಪಾಲಿಸು.'

ವೇಂಕಟಶೈಲವಲ್ಲಭ, ಅಂದು ವೇಂಕಟಾಚಲದ ಗುಡಿಯ ಅರ್ಚಕರು ನೀತಿಗೆಟ್ಟಾಗ ವಿಜಯನಗರದ ಸಾಳ್ವ ನರಸಿಂಹ ರಾಜ ಬಹುಪರಿಯಿಂದ ಅವರನ್ನು ಸರಿದಾರಿಗೆ ತರಲು ಯತ್ನಿಸಿ, ವಿಫಲನಾಗಿ, ಕೊನೆಗೆ ಅವರ ವಂಶವನ್ನೆ ನಿರ್ನಾಮ ಮಾಡಿದ. ಬ್ರಹ್ಮಹತ್ಯೆ ಅಂಟಿಕೊಂಡಿತು. ಆತ ನನ್ನ ಬಳಿಗೆ ಬಂದಾಗ ನಾನು ಪ್ರಾಯಶ್ಚಿತ್ತ ಮಾಡಿಸಿ ಪಾಪ ಪರಿಹಾರ ಮಾಡಿದೆ. ಎಲ್ಲವೂ ದುರಿತದೂರನಾದ ನಿನ್ನ ಸಂಕಲ್ಪ. ಆದರೆ ರಾಜನು ನನ್ನನ್ನು ಸಿಂಹಾಸನದ ಮೇಲೆ ಕೂಡಿಸಿದ. ಮುತ್ತಿನ ಕವಚ ಕುಂಡಲಗಳನ್ನು ತೊಡಿಸಿದ ದಾಸನಂತೆ ಬಳಿಯಲ್ಲಿ ಕೈ ಜೋಡಿಸಿ ನಿಂತ ಇದು ನನ್ನ ಸುಖಪ್ರಾರಬ್ಧ. ಹಿಂದೆ ಬಾಲ್ಯದಲ್ಲಿ ನಾನು ದನ ಮೇಯಿಸುತ್ತಿದ್ದೆ. ಬಡ ತಂದೆತಾಯಿಗಳು ನನಗೆ ಮುಂಜಿ ಮಾಡಲೂ ಶಕ್ತರಾಗಿರಲಿಲ್ಲ ಆಗಿನದು ದುಃಖ ಪ್ರಾರಬ್ಧ. ಈಗ ಸುಖ ಪ್ರಾರಬ್ಧ. ಸಣ್ಣ ಶಾಲ್ಯೋದನ, ಬೆಣ್ಣೆ ಕಾಸಿದ ತುಪ್ಪ, ಚಿನ್ನದ ಹರಿವಾಣದಲ್ಲಿ ಭೋಜನ ಒಮ್ಮೆ. ಕದನ್ನಕ್ಕೂ ಬಾಯಿ ಬಿಡಬೇಕಾಗುವ ಪರಿಸ್ಥಿತಿ ಇನ್ನೊಮ್ಮೆ "ಮುನ್ನ ಮಾಡಿದ

ಕರ್ಮ ಬೆನ್ನ ಬಿಡದಿರೆ ನಿನ್ನನೋಲೈಸಬೇಕಯ್ಯ ಗೋವಿಂದ"
ನೀ ನನ್ನ ಪಾಲಿಸಲೇ ಬೇಕಯ್ಯ.

**ದುರಿತದೂರ ನೀನಲ್ಲದೆ ಧರೆಯೊಳು ದೊರೆಗಳ ಕಾಣೆ, ನಿನ್ನಾಣೆ!** ನೀನು ದುರಿತದೂರ. ಪಾಪಗಳನ್ನು ಸುಡುತ್ತ 'ವ್ಯಂಕಟ'ನೆನಿಸಿದ ನೀನು ಬೆಟ್ಟದ ಮೇಲಿರುವುದರಿಂದ ಬೆಟ್ಟವೂ ಪಾಪಗಳನ್ನು ಸುಡುವ ಶಕ್ತಿ ಹೊಂದಿದೆ. ಅದರಿಂದ ಅದನ್ನೂ 'ವ್ಯಂಕಟ' ಎಂದು ದೇವತೆಗಳು ಕರೆದರು.

'ವ್ಯಂ ಪಾಪಂ ಕಟತೇಯಸ್ಮಾತ್ ಪಾಪದಾಹನಶಕ್ತಿತಃ।
ವ್ಯಂಕಟಾಚಲ ಇತ್ಯೇವ ನಾಮ ದೇವಾಸ್ತದಾ ಜಗುಃ॥'

ಕೃತ, ತ್ರೇತಾ, ದ್ವಾಪರಗಳಲ್ಲಿ ಕ್ರಮವಾಗಿ ವೃಷಭಾಚಲ, ಅಂಜನಾಚಲ, ಶೇಷಾಚಲವೆನಿಸಿದ ಈ ಬೆಟ್ಟ ಕಲಿಯುಗದಲ್ಲಿ ವ್ಯಂಕಟಾಚಲವೆನಿಸಿತು. ನೀನೊಬ್ಬ ಸ್ಪರ್ಶಮಣಿ. ಅರಸು ಮುಟ್ಟಲು ದಾಸಿ ರಂಭೆಯಾಗುವಂತೆ, ಪರುಷ ಸೋಂಕಲು ಲೋಹ ಚಿನ್ನವಾಗುವಂತೆ ನಿನ್ನ ವಿಶೇಷ ಸನ್ನಿಧಾನ ಪಾತ್ರವಾದ ಬೆಟ್ಟದ ಕಲ್ಲೂ ಮಣ್ಣೂ ಶುಚಿಯಾಗಿದೆ, ಪಾಪ ಪರಿಹಾರಕವಾಗಿದೆ.

'ವ್ಯಂಕಟಾದ್ರೌ ಶುಚೌ ಕ್ಷೇತ್ರೇಽಶುಚಿದೋಷೋ
ನ ವಿದ್ಯತೇ'

ಶುಚಿ ಕ್ಷೇತ್ರವಾದ ವ್ಯಂಕಟಾಚಲದಲ್ಲಿ ಅಶುಚಿ ದೋಷವೆಂಬುದಿಲ್ಲ. ಶ್ವೇತದ್ವೀಪ, ಅನಂತಾಸನ, ವೈಕುಂಠಗಳಿಗೆ ಸಮಾನ ಪಂಢರಪುರ, ಉಡುಪಿ ಮತ್ತು ತಿರುಪತಿಗಳು. ಶಬ್ದಬ್ರಹ್ಮ, ಅನ್ನಬ್ರಹ್ಮ, ನಾದಬ್ರಹ್ಮರ ಪವಿತ್ರ ಕ್ಷೇತ್ರಗಳು. ಬೆಟ್ಟಕ್ಕೆ ನೀಮಾಡಿದ ಶುದ್ಧಿಯ ಒಂದಂಶವನ್ನು ನನ್ನಲ್ಲಿ ಮಾಡಿದರೆ ನಾನು ಪುನೀತ

ನಾಗುವೆನು. ಧನ್ಯನೆನಿಸುವೆನು. ಹೀಗೆ ಮಾಡದಿದ್ದರೆ ನಿನ್ನಾಣೆ! ದುರಿತದೂರನೆಂಬ ಬಿರುದು ನಿನಗೇಕೆ, ಹೇಳು ?

ದುರಿತಗಳನ್ನೆಲ್ಲ ಕಳೆವ ನಿನ್ನಂಥ ದೊರೆ ಧರೆಯೊಳಗೆ ಇನ್ನಿಲ್ಲ.

'ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾ
ಮಯಾಃ ।
ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ ।'

ನೀರೇ ತೀರ್ಥವಲ್ಲ, ಮಣ್ಣು ಕಲ್ಲುಗಳ ಪ್ರತಿಮೆಗಳೆ ದೇವರಲ್ಲ. ಅವೆಲ್ಲವೂ ಬಹುಕಾಲ ಸೇವಿಸುವುದರಿಂದ ಪಾಪ ಪರಿಹಾರ ಮಾಡುವುವು. ಸಾಧು ಜನರು ಮಾತ್ರ ದರ್ಶನದಿಂದಲೆ ಪಾಪ ಪರಿಹಾರ ಮಾಡಬಲ್ಲರು. ಆದರೆ ಅವರೂ ನಿನ್ನ ಸನ್ನಿಧಾನ ಪಾತ್ರರಾದುದರಿಂದಲೆ ಪಾವನರೆನಿಸಿದ್ದಾರೆ.

'ಸಾಧವೋ ನ್ಯಾಸಿನಃ ಶಾಂತಾಃ
ಬ್ರಹ್ಮಿಷ್ಠಾ ಲೋಕ ಪಾವನಾಃ ।
ಹರಂತ್ಯಘಂ ತೇಂಗ ಸಂಗಾತ್
ತೇಷ್ವಾಸ್ತೆ ಹ್ಯಘ ಭಿದ್ಧರಿಃ ॥'

ವಿರಕ್ತ, ಶಾಂತ, ಬ್ರಹ್ಮನಿಷ್ಠ, ಲೋಕಪಾವನರೆನಿಸಿದ ಸಾಧು ಜನರು ತಮ್ಮ ಅಂಗಸಂಗದಿಂದ ಎಲ್ಲ ಪಾಪಗಳನ್ನು ಪರಿಹರಿಸಲು ಕಾರಣ, ಅವರಲ್ಲಿ ಪಾಪಪರಿಹಾರಕನಾದ ಹರಿ ಸನ್ನಿಹಿತನಾಗಿರುವುದೇ ಆಗಿದೆ. ನೀನು ಸನ್ನಿಹಿತನಾದೆ ಎಂದರೆ ವರ್ಣಬಾಹ್ಯನಾದವನೂ ತ್ರಿಲೋಕ ಪಾವನನೆನಿಸುವನು,

'ವೈಷ್ಣವೋ ವರ್ಣಬಾಹ್ಯೋಽಪಿ ಪುನಾತಿ ಭುವನತ್ರಯಂ'

ಆದ್ದರಿಂದಲೇ ಪುಲ್ಕಸ, ಶ್ವಪಚ ಮ್ಲೇಚ್ಛರೂ ಕೂಡ ಹರಿ ಪಾದ ಒಂದನ್ನೇ ಆಶ್ರಯಿಸಿದವರಾದರೆ ಅವರು ಮಹಾ ಭಾಗ್ಯಶಾಲಿಗಳು. ಅವರಿಗೆ ನಮೋ ಎನ್ನಬೇಕು ಎಂದು ಹೇಳುತ್ತಾರೆ.

ಪುಲ್ಕಸಃ ಶ್ವಪಚೋವಾಪಿ ಯೇಚಾನ್ಯೇ ಮ್ಲೇಚ್ಛ ಜಾತಯಃ|
ತೇಽಪಿ ವಂದ್ಯಾಮಹಾಭಾಗಾ ಹರಿಪಾದೈಕ ಸೇವಕಾಃ ||'

ಹೀಗೆ ಅತ್ಯಂತ ಪಾವನರಾದ ಸಾಧು ಜನರೂ ಪಾಪ ಪರಿಹಾರ ಮಾಡುವುದರಲ್ಲಿ ಸ್ವಯಂ ಸಮರ್ಥರೆಂಬ ಭ್ರಮೆ ಎಂದೂ ನನಗಿಲ್ಲ. ನಿಜ ಹೇಳುತ್ತೇನೆ, ನಿನ್ನಾಣೆ. ನೀನೆ ನನ್ನ ದುರಿತ ಗಳನ್ನು ದೂರ ಮಾಡಬೇಕು.

'ಸೋನಾದಿರ್ವಾಸುದೇವಃ ಶಮಯತು
ದುರಿತಂ ಜನ್ಮಜನ್ಮಾರ್ಜಿತಂ ನಃ'

'ನಾನ್ಯಂಭಜಾಮಿ ನ ವದಾಮಿ ನ ಚಿಂತಯಾಮಿ
ತ್ವತ್ಪಾದಕಂಜಯುಗಳಂ ಸತತಂ ನಮಾಮಿ ।
ಏವಂಹಿ ಮಾಮುಪಗತಂ ಶರಣಂ ಚ ರಕ್ಷ
ದೂರೇಣ ಯಾಂತು ಮಮಪಾತಕ ಸಂಚಯಾಸ್ತೇ||'

ಏಕೆಂದರೆ ಪಾಪವೆಂಬುದು ನಾವು ನಿನ್ನಲ್ಲಿ ಮಾಡಿದ ಅಪರಾಧ ಹೊರತು ಬೇರೇನಿಲ್ಲ. 'ಶ್ರುತಿ ಸ್ಮೃತೀ ಹರೇ ರಾಜ್ಞಾ' ಎಲ್ಲ ವಿಧಿ

ನಿಷೇಧಗಳೂ ನಿನ್ನ ಆಜ್ಞೆ ಆಗಿರುವುದರಿಂದ ಅವನ್ನು ಮೀರಿದಾಗ ನಿನ್ನಾಜ್ಞೆಯ ಉಲ್ಲಂಘನೆಯಾಗುತ್ತದೆ. ಅದುವೆ ಅಪರಾಧ, ಅದುವೆ ಪಾಪ. ನಿನ್ನಲ್ಲಿ ಅಪರಾಧ ಮಾಡಿದ ಪಾಪಿಗೆ ಕ್ಷಮೆ ನೀಡಬೇಕಾದವನು ನೀನು. ನೆಲದಲ್ಲಿ ಜಾರಿ ಬೀಳುವವನಿಗೆ ನೆಲವೆ ಆಸರೆ ಕೊಡಬೇಕು ತಾನೆ!

'ಭೂಮೌ ಸ್ಖಲಿತ ಪಾದಾನಾಂ ಭೂಮಿರೇವಾವಲಂಬನಂ।
ತ್ವಯಿ ಜಾತಾಪರಾಧಾನಾಂ ತ್ವಮೇವ ಶರಣಂ ಪ್ರಭೋ॥'

**ಆರು ನಿನ್ನ ಹೊರತೆನ್ನ ಪೊರೆವರು, ನೀರಜಾಕ್ಷ, ಹರಿಯೇ?**

'ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ।
ತಸ್ಮಾತ್ ಕಾರುಣ್ಯಭಾವೇನ ರಕ್ಷರಕ್ಷ ಜನಾರ್ದನ॥'

ಎಂದು ನಿನ್ನನ್ನೆ ಮೊರೆ ಹೋಗುತ್ತೇನೆ. ನೀರಜಾಕ್ಷ, ಕಮಲದಂತೆ ನಗುವ ಪ್ರೇಮಪೂರ್ಣ ನಯನಗಳು ನಿನ್ನವು! ಆ ನಯನಗಳ ಕುಡಿನೋಟವನ್ನೊಮ್ಮೆ ಬೀರಿದೆ ಎಂದರೆ ನಮ್ಮೆಲ್ಲ ಪ್ರಾರಬ್ಧವೂ ಮಾಯವಾಗುವುದು. ಅವಿದ್ಯೆಯ ಬಿಗಿಯಾದ ಆವರಣದೊಳಗೆ ಹುದುಗಿದ್ದು ಉಸಿರಾಡಲೂ ಅವಕಾಶವಿಲ್ಲದಂತೆ ಬೆಂದು ಚಡಪಡಿಸುತ್ತಿರುವ ಆತ್ಮಕ್ಕೆ ನಿನ್ನ ಆ ಶೀತಲ ಕೋಮಲ ಸ್ನಿಗ್ಧ ಕಟಾಕ್ಷದ ಅಮೃತ ಧಾರೆ ಹರಿದು ಬರುವುದುಂಟೆ ದೇವ?

**ಅಪಾರ ಮಹಿಮ ನೀನು:** ನಿನ್ನ ಮಹಿಮೆಗಳ ಒಂದು ಲೇಶವನ್ನೂ ಸರಿಯಾಗಿ ತಿಳಿಯದ ಮೂಢ ನಾನು. ನನ್ನ ಹಿಂದಿನ ತಪ್ಪುಗಳಿಗೆ ನೀನು ಶಿಕ್ಷೆ ನೀಡು. ಬೇಡವೆನ್ನಲಾರೆ. ನೀನು

ಕೊಡುವ ಶಿಕ್ಷೆಯೆ ನಮ್ಮ ಶಕ್ತಿಪರೀಕ್ಷೆಯಾಗಲಿ. ವಿಪತ್ತು ಬಂದಾಗಲೆ ಅವನ್ನು ಗೆದ್ದು ನಾವು ದೊಡ್ಡವರಾಗಬೇಕು.

'ವಿನಾ ವಿಪತ್ತಿರ್ ಮಹಿಮಾ ಕೇಷಾಂ ಕುತ್ರ ಭವಿಷ್ಯತಿ ?'

ಆದರೆ ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ ಎಸೆಯಬೇಡ. ಸ್ವಲ್ಪ ಮೆತ್ತಗಿನ ಶಿಕ್ಷೆ ಕೊಡು. ಸರಿಯಾದ ದಾರಿ ತೋರು. ಹೀಗೆ ಮಾಡದೆ ನೀನು ಉಪೇಕ್ಷಿಸಿದರೆ ನಾನಿನ್ನೂ ಘೋರ ಅಪ ರಾಧಗಳನ್ನೆ ಮಾಡಿ ಪರಿತಪಿಸುವ ಸಂಭವವಿದೆ.

**ಪುರಾಣಪುರುಷ, ನೀನು.**

'ನಾರಾಯಣೋ ವಾ ಇದಮಗ್ರ ಆಸೀದ್,
ನ ಬ್ರಹ್ಮಾ ನ ಚ ಶಂಕರಃ'

ಎಂದು ಶ್ರುತಿ ಸಾರುವಂತೆ ಪ್ರಳಯ ಕಾಲದಲ್ಲಿಯೂ ಮೆರೆದ ಅನಾದಿ ಪುರುಷ ನೀನೆ. ಬ್ರಹ್ಮಾಂಡವನ್ನೆ ಲಯಗೈದರೂ ಪಾಪ ಲೇಶವಿಲ್ಲದವನು ನೀನೆ. ಅದರಿಂದಲೆ ದುರಿತದೂರನೆಂದು ನಿನಗೆ ಬಿರುದು.

'ಯೋಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ
ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ ।
ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್
ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಂ ॥'

ನಮ್ಮ ಹೃದಯದಲ್ಲಿದ್ದು ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ನ್ನೆಲ್ಲ ಪ್ರೇರಿಸುವ ಮಹಾಪುರುಷನೆಂದು ಬಾಲಕ ಧ್ರುವನಿಂದ ಸ್ತುತಿ

ಸಲ್ಪಟ್ಟವ ನೀನು ನನ್ನ ಇಂದ್ರಿಯಗಳನ್ನು ಸರಿಯಾದ ದಾರಿಯಲ್ಲಿ ಪ್ರೇರಿಪಿಸಿ ನನ್ನ ಘೋರ ದುರಿತಗಳನ್ನು ದೂರ ಮಾಡು. ಸರಿಯಾದ ಪ್ರೇರಣೆ ಇಲ್ಲದೆ ಸ್ವಚ್ಛಂದವಾಗಿ ಹರಿಯುವ ಇಂದ್ರಿಯಗಳೆ ಎಲ್ಲ ದುರಿತಗಳಿಗೆ ಮೂಲ ತಾನೆ !

**ಇಂದಿರೇಶ,** ಲಕ್ಷ್ಮೀರಮಣ, ಆ ನಿನ್ನ ದೇವಿ, ಜಗನ್ಮಾತೆ. ನೀನು ಜಗತ್ತಿಗೆ ತಂದೆ. ನಿಮ್ಮ ಮಕ್ಕಳು ನಾವು. ನಮ್ಮನ್ನು ನೀವು ಪಾಲಿಸದಿದ್ದರೆ ಅದು ಸರಿಯೆ? ನಾವು ದುರಿತ ರಾಶಿಯಲ್ಲಿ ಮುಳುಗಿದ್ದರೂ, 'ಹೆತ್ತ ಮಕ್ಕಳು ಹುಚ್ಚರಾದರೆ, ತಾಯ್ತಂದೆ ಎತ್ತದೆ ನೆಲಕ್ಕೆ ಬಿಸಾಡುವರೆ ಗೋವಿಂದ? ಆ ತಾಯಿ ಇಂದಿರೆ, ಕರುಣಾಮಯಿ. ನಮ್ಮ ಕಷ್ಟ ಕಂಡು ಸಹಿಸಳು. ಅವಳಿಗಾಗಿಯಾದರೂ ನಮ್ಮನ್ನು ನೀನು ಪಾಲಿಸಬೇಕು. ನಿನ್ನ ಮುದ್ದಿನ ಅರಗಿಣಿಯಾದ ಆಕೆ ಬಯಸಿದುದನ್ನು ನೀನು ನಡೆಸದಿರುವೆಯ? ಆಕೆ ನಮಗಾಗಿ ನಮ್ಮ ಮೋಕ್ಷ ಸಾಧನೆಗಾಗಿ ಅಲ್ಲವೆ, ತ್ರಿಗುಣಾತ್ಮಕವಾದ ಪ್ರಕೃತಿಯಲ್ಲಿ ಅಭಿಮಾನಿನಿಯಾಗಿ ನಿಂತು ಪ್ರಪಂಚದ ಸೃಷ್ಟಿಸ್ಥಿತಿಲಯಗಳನ್ನು ಮಾಡುತ್ತಾಳೆ? ಪವಿತ್ರ ವೇದವಾಣಿಯಲ್ಲಿ ಅಭಿಮಾನಿನಿಯಾಗಿ ನಿಂತು ಮಕ್ಕಳ ಕಣ್ಣೀರೊರೆಸುತ್ತ ಮಮತೆಯಿಂದ ಹಿತ ನುಡಿಯುತ್ತಿದ್ದಾಳೆ.—

'ಋಚಃ ಸಾಮಾನಿ ಯಜೂಂಷಿ
ಸಾ ಹಿ ಶ್ರೀರಮೃತಾ ಸತಾಂ'

ಅದುಃಖಮಿತರತ್ ಸರ್ವಂ ಜೀವಾ ಏವ ತು ದುಃಖಿನಃ ।
ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ

'ಬೇರಾರಿಗೂ ದುಃಖವಿಲ್ಲ ಜೀವರಿಗೇ ದುಃಖ ಅವರ ದುಃಖ ಪರಿಹಾರಕ್ಕಾಗಿಯೇ ಈ ಶ್ರುತಿ ಹೊರಟಿದೆ.'

**ಅರವಿಂದ ನಯನ ಎನ್ನ ತಂದೆ ತಾಯಿ ನೀನೇ:** ಆ ತಾಯಿ ಇಂದಿರೆಯಿಂದ ಮಕ್ಕಳನ್ನು ಹಡೆಯುವ, ಸಾಕುವ, ಕಾರ್ಯಗಳನ್ನು ಮಾಡಿಸಿ ಅವರ ಪೂರ್ಣ ಯೋಗಕ್ಷೇಮಗಳನ್ನು ನೋಡಿಕೊಳ್ಳುವ ನೀನೆ ನಿಜವಾದ ತಾಯಿ. ಮಕ್ಕಳನ್ನು ಹುಟ್ಟಿಸುವ ಪೋಷಿಸುವ ಕಾರ್ಯಗಳಲ್ಲಿ ಹೆಣ್ಣಿನ ಆಶ್ರಯವನ್ನು ಪೇಕ್ಷಿಸದ ನೀನೆ ತಾಯಿ ಎನ್ನುವುದು ನ್ಯಾಯ 'ತಾಯ್ಯೈ ಸಂತಾನ ಪಾಲನೆಯೋಃ' ಎಂಬಂತೆ ಸಂತಾನ ಕರ್ಮ ಪಾಲನ ಕರ್ಮಗಳನ್ನು ಮಾಡುವವಳು 'ತಾಯಿ' ಎನಿಸುವವಳು ಸ್ವಯಂ ನೀನೆ ಅವನ್ನು ಮಾಡಿದರೆ ನೀನೆ ತಾಯಿಯಾಗುವಿ ತಾನೆ! ಲೋಕದ ತಂದೆತಾಯಿಗಳೂ 'ತಂದೆ ತಾಯಿ'ಗಳೆನಿಸಿರುವುದು ನಿನ್ನಿಂದಲೆ. ಅದೂ ಒಂದೊಂದು ಜನ್ಮಕ್ಕೆ ಮಾತ್ರ ಸಂಬಂಧಿಸಿದುದು. ಜನ್ಮ ಜನ್ಮಾಂತರಗಳಲ್ಲಿ ತಂದೆತಾಯಿ ಎನಿಸುವವನು ನೀನೆ. ನಿನ್ನಲ್ಲಿ ತಾಯಿಯ ವಾತ್ಸಲ್ಯವಿದೆ. ತಂದೆಯ ಕರ್ತವ್ಯಪ್ರಜ್ಞೆ ಇದೆ. ಆದ್ದರಿಂದ ನಾನು ನಿನ್ನಲ್ಲಿ ಬೇಡುವೆ ನನ್ನನ್ನು ನೀನು ಪಾಲಿಸು.

ದೇವ, ಅರವಿಂದನಯನ, ಕಮಲದಂಥ ನಿನ್ನ ಸ್ನಿಗ್ಧ ಕೋಮಲ ನಯನಗಳಿಂದ ಒಮ್ಮೆ ನನ್ನ ನೋಡೆಂದು ತಿರುಗಿ ಬೇಡುವೆನು.

**ಹೊಂದಿದವರಘವೃಂದ ಕಳೆವ ಮಂದರಾದ್ರಿಧರನೆ, ಶ್ರೀಧರನೆ.**

ಅಂದು ದೇವೇಂದ್ರನು ದೂರ್ವಾಸನಿತ್ತ ಪುಷ್ಪಮಾಲಿಕೆ

ಯನ್ನು ಐರಾವತದ ಕಾಲಿಂದ ತುಳಿಸಿ ಅಪರಾಧ ಮಾಡಿದ್ದರ್ಸ
ಮುನಿಯ ಶಾಪದಿಂದ ಬಂದ ಅಘವನ್ನು ಅಮಂಗ
ವನ್ನು, ದಾರಿದ್ರ್ಯವನ್ನು ನೀನು ಪರಿಹರಿಸಿದೆ. ಅವಕ್ಕಾ
ಮಂದರ ಪರ್ವತವನ್ನೆ ಬೆನ್ನ ಮೇಲೆ ಹೊತ್ತೆ. ದೇವದಾನವರಿಂ
ಕ್ಷೀರಸಾಗರದ ಮಥನ ಮಾಡಿಸಿ ಸಾಗರದಿಂದ ಮಂಗಲ ದೇವ
ಯಾದ ಇಂದಿರೆಯನ್ನು ಬರಮಾಡಿಕೊಂಡೆ. ಅವಳನ್ನು ಎ
ಯಲ್ಲಿ ಧರಿಸಿಕೊಂಡು ಶ್ರೀಧರನೆನಿಸಿದೆ. ಪ್ರಸನ್ನಳಾದ ದೇವಿಯ
ಕುಡಿನೋಟದ ಪರಮಾನುಗ್ರಹವನ್ನು ಮೂರು ಲೋಕಕ್ಕ
ಒದಗಿಸಿ ಮಂಗಳ ಉಂಟು ಮಾಡಿದೆ. ಭಕ್ತನಾದ ದೇವೇಂದ್ರ
ಶಾಪವನ್ನು ಕಳೆದೆ. ಹೀಗೆ ಹೊಂದಿದವರ ಅಘವೃಂದ ಕಳೆ
ನೀನು ದೇವತೆಗಳಿಗೆ ಅಮೃತ ಉಣಿಸಿದಂತೆ ನನಗೂ ನಿನ್ನ
ಅರವಿಂದದಂಥ ನಯನಗಳ ಕುಡಿನೋಟದ ಅಮೃತ ಸೇಚನೆ
ಯನ್ನು ಮಾಡಬಾರದೆ? ಶ್ರೀದೇವಿಯನ್ನು ಎದೆಯಲ್ಲಿ ಹೊತ್ತಂತೆ
ನನಗೂ ನಿನ್ನ ಕುಡಿ ನೋಟದ ಸ್ಪರ್ಶಸುಖ ನೀಡಬಾರದೆ?
'ಹೆಸರುಳ್ಳ ನದಿಗಳ ಒಳಕೊಂಬ ಸಾಗರ ಬಿಸುಡುವನೆ, ಕಾಲ
ಹೊಳೆಗಳ, ಗೋವಿಂದ?'

**ಮಂಗಳಾಂಗ** 'ಮಧುರಾಧಿಪತೇರಖಿಲಂ ಮಧುರಂ' ಎಂಬಂತೆ ನಿನ್ನ ಮೈ, ಮನಸ್ಸು, ಮಾತು ಎಲ್ಲವೂ ಮಧುರ, ಮಂಗಳಕರ. ಆದ್ದರಿಂದಲೆ

'ನಿತ್ಯೋತ್ಸವೋ ಭವೇತ್ತೇಷಾಂ ನಿತ್ಯಶ್ರೀರ್ನಿತ್ಯ ಮಂಗಲಂ ||
ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನೋ ಹರಿಃ ||'

ಯಾರ ಎದೆಯಲ್ಲಿ ಎಲ್ಲ ಮಂಗಳಗಳಿಗೂ ಆಧಾರನಾದ

ಹರಿ ಇರುವನೋ ಅವರಿಗೆ ನಿತ್ಯ ಸುಖ, ನಿತ್ಯ ಸಂಪತ್ತು, ನಿತ್ಯ ಮಂಗಳ.' ಎನ್ನುತ್ತಾರೆ. ನಿನ್ನ ಮಕ್ಕಳಾದ ನಾವು ಅಮಂಗಳಕರವಾದ ಪಾತಕಗಳ ಹೊರೆ ಹೊರಲಾರೆವು. ನೀ ಬಂದು, ನಮ್ಮೆದೆಯಲ್ಲಿ ನಿಲ್ಲಬೇಕು. ಪಾತಕಗಳನ್ನು ಹೊರದೂಡಬೇಕು.

**ಮಹನೀಯಗುಣಾರ್ಣವ,** ಸದ್ಗುಣಗಳ ಸಾಗರ ನೀನು. ನಿನ್ನ ಗುಣಗಳನ್ನು ಆದಿಶೇಷನೂ ತನ್ನ ಸಾವಿರ ವದನಗಳಿಂದ ಹೇಳಿ ಮುಗಿಸಲಾರ. ಹೆಚ್ಚೇಕೆ, ಎಲ್ಲ ಗುಣಗಳನ್ನು ಆತ ತಿಳಿದುಕೊಳ್ಳಲೂ ಸಮರ್ಥನಲ್ಲ.

'ಸಹಸ್ರವದನಃ ಶೇಷೋಽಶೇಷವೇದಾರ್ಥಕೋವಿದಃ ।
'ನಾಹಂ ಜಾನೇ' ಇತಿ ಬ್ರೂತೇ ಯನ್ನಖಾಗ್ರಾಗ್ರ್ಯ ವೈಭವಂ ॥'

ಸಮಸ್ತ ವೇದಾರ್ಥಗಳನ್ನು ಬಲ್ಲ ಸಹಸ್ರವದನನಾದ ಶೇಷನೂ ನಿನ್ನ ಉಗುರಿನ ಕೊನೆಯಲ್ಲಿರುವ ಸೌಂದರ್ಯ ಶ್ರೀಯನ್ನು 'ನಾನು ಪೂರ್ತಿ ತಿಳಿದಿಲ್ಲ' ಎಂದೆ ಹೇಳುತ್ತಾನೆ ಆದ್ದರಿಂದಲೆ,

'ಭಾರತಸ್ಯ ಸಮುದ್ರಸ್ಯ ಮೇರೋರ್ನಾರಾಯಣಸ್ಯ ಚ ।
ಅಪ್ರಮೇಯಾನಿ ಚತ್ವಾರಿ ಪುಣ್ಯಂ ತೋಯಂ ಗುಹಾ
ಗುಣಾಃ ॥'

ಭಾರತದ ಪುಣ್ಯ, ಸಮುದ್ರದ ನೀರು, ಮೇರುವಿನ ಗುಹೆಗಳು, ನಾರಾಯಣನ ಗುಣಗಳು—ಇವುಗಳಿಗೆ ಮಿತಿ ಎಂಬುದಿಲ್ಲ ಎನ್ನುತ್ತಾರೆ. ಉಪನಿಷತ್ತೂ ನಿನ್ನನ್ನು 'ಅನಂತ' ಎಂದೇ ಕರೆದಿದೆ. ನಿನ್ನ ಗುಣಗಳನ್ನು ಎಣಿಸುತ್ತ ಹೋದರೆ ಅದಕ್ಕೆ ಕೊನೆ

ಎಂಬುದಿಲ್ಲ ಎಂಬುದೆ ಉಪನಿಷತ್ತಿನ ಆಶಯ. ನಿನ್ನ ಅನಂತ ಗುಣಗಳಲ್ಲಿ ಕೆಲವನ್ನಾದರೂ ಕದಿಯುವಾಸೆ ನಮಗೆ. ಕದ್ದು ಹೃದಯದೊಳಗೆ ಬಚ್ಚಿಟ್ಟುಕೊಂಡು ಸದಾ ನೋಡುತ್ತಿರ ಬೇಕೆಂಬಾಸೆ. ಕದ್ದರೆ ಏನು ಶಿಕ್ಷೆ? ಹೊಂದಿದವರ ಅಘವೃಂದ ಕಳೆವೆಯಲ್ಲವೆ? ನಾವು ನಿನ್ನ ಗುಣಗಳನ್ನು ಕದ್ದರೆ ನೀನು ನಮ್ಮ ಪಾಪಗಳನ್ನು ಕಸಿದು ಕೊಳ್ಳುವೆ. ನಮಗೆ ಬೇಕಾದುದೂ ಇದುವೆ. 'ಕೋಪೋಽಪಿ ದೇವಸ್ಯ ವರೇಣ ತುಲ್ಯ !' ದೇವರು ಕೋಪಿಸಿದರೂ ಅದು ವರಕ್ಕೆ ಸಮಾನ !

**ಗಂಗೋದಿತ ಪಾದ,** ಹಿಂದೆ ಕಪಿಲ ಮುನಿಯಲ್ಲಿ ಅಪ ಚಾರಗೈದು ಬೂದಿಯಾದ ಅರವತ್ತು ಸಾವಿರ ಮಂದಿ ಸಗರಪುತ್ರ ರಿಗೆ ಸದ್ಗತಿಯಾದುದು ನಿನ್ನ ಪಾದೋದಕವಾದ ಗಂಗೆಯ ಪಾವನ ಸ್ಪರ್ಶದಿಂದ. ಮೂರು ಲೋಕದಲ್ಲಿಯೂ ಮೂರು ಹೆಸರು ಗಳಿಂದ-ಮಂದಾಕಿನೀ ಭಾಗೀರಥೀ 'ಭೋಗವತೀ' ಎಂಬ ಹೆಸರು ಗಳಿಂದ ಹರಿಯುವ ಪರಮ ಪಾವನೆಯಾದ ಗಂಗೆಯಲ್ಲಿ ಮಿಂದು ಪುನೀತರಾದವರು, ಆಗುತ್ತಿರುವವರು ಎಷ್ಟೆಂದು ಹೇಳಲಿ? ನೀನು ನಮ್ಮ ಕಣ್ಣಿಗೆ ಕಾಣಿಸುವವನಲ್ಲ, ಸಿಗುವವನಲ್ಲ. ಆ ಗಂಗಾಮಾತೆ ನಮಗಾಗಿ ನಿನ್ನ ತೇಜಸ್ಸಿನ ಒಂದಂಶವನ್ನು ತನ್ನಲ್ಲಿ ತುಂಬಿಕೊಂಡು ಹರಿದು ಬರುತ್ತಾಳೆ

'ಸ ಏವ ದ್ರವರೂಪೇಣ ಗಂಗಾಂಭೋ ನಾತ್ರ ಸಂಶಯಃ'

'ಗಂಗಾಜಲವೆಂಬುದು ದ್ರವರೂಪದಿಂದಿರುವ ಹರಿಯೆ ಎನ್ನುವುದರಲ್ಲಿ ಸಂಶಯವಿಲ್ಲ, ಎನ್ನುವುದುಂಟು. ಆಕೆ ದಯಾ

ಮುಯಿ. ಮುಳಬಾಗಿಲಿನ ನೃಸಿಂಹ ತೀರ್ಥದಲ್ಲಿ ನನಗೆ ದರ್ಶನ ನೀಡಿದವಳು.

ಗಂಗಾ ಗಂಗೇತಿ ಯೋಬ್ರೂಯಾ ದ್ಯೋಜನಾನಾಂ ಶತೈರಪಿ |
ಮುಚ್ಯತೇ ಸರ್ವಪಾಪೇಭ್ಯಃ .. ........... ||

ಗಂಗೆ, ಗಂಗೆ, ಎಂದು ನೂರಾರು ಯೋಜನಗಳ ದೂರ ದಿಂದ ಕೂಗಿದರೂ ಎಲ್ಲ ಪಾಪ ಪರಿಹಾರ ಮಾಡುತ್ತಿದ್ದಾಳೆ ಎಂದ ಮೇಲೆ ಗಂಗೋದಿತಪಾದನಾದ ನೀನೆಷ್ಟು ದಯಾಮಯ ಮತ್ತು ಪವಿತ್ರನಿರಬಹುದು ! ನಿನ್ನ ಮಂಗಳ ವಿಗ್ರಹಕ್ಕೆ ಸಾಲ ಗ್ರಾಮಕ್ಕೆ ಸುತ್ತುವರಿಯಿಸಿದ ಶಂಖೋದಕವೂ ಬ್ರಹ್ಮಹತ್ಯಾ ನಿವಾರಕವೆಂಬುದನ್ನು ನಾನು ಸ್ವತಃ ಕಂಡಿದ್ದೇನೆ. ಇದನ್ನು ಜನರು ನಂಬದಿದ್ದಾಗ ಗೇರೆಣ್ಣೆಯಲ್ಲಿ ತೋಯಿಸಿದ ಬಟ್ಟೆಗೆ ಶಂಖೋದಕವನ್ನು ಪ್ರೋಕ್ಷಿಸಿದೆ. ಆಗ ಆ ಬಟ್ಟೆ ಶುಭ್ರವಾದು ದನ್ನು ಜನರು ಪ್ರತ್ಯಕ್ಷ ನೋಡಿದ್ದಾರೆ.

ಅಂಗಜಪಿತ, ಲೋಕದ ಎಲ್ಲ ಸೌಂದರ್ಯಗಳ ಸಾರ ಭಾಗವಂತಿರುವ ನಿನ್ನ ಅಂಗಗಳಿಂದ ಜನಿಸಿದ ಆ ಅಂಗಜ ಜಗನ್ಮೋಹಕನಾಗಿಯೆ ಜನಿಸಿದ. ಅವನೇನು ಪುಣ್ಯ ಮಾಡಿ ದ್ದನೊ ! ನೀ ದಯೆ ದೋರಿದರೆ ನಾನೂ ಏಕೆ ಸುಂದರನಾಗ ಬಾರದು ? ಬೆಟ್ಟದಂಥ ಪ್ರಾರಬ್ಧದ ಹೊರೆ ಹೊತ್ತು ಬಳಲಿ ಬೆಂಡಾಗಿ ವಿಕಾರವಾಗಿ ಕಾಣುತ್ತಿದ್ದೇನೆ. ಶ್ರೀ ಹರಿ, ನನ್ನನ್ನು ಪಾಲಿಸು. ಆ ನಿನ್ನ ತುಂಟ ಮಗ ಮನ್ಮಥ ಎಲ್ಲರನ್ನೂ ಆಟ ಆಡಿಸುತ್ತಾನೆ. ಎಲ್ಲರನ್ನೂ ಕಾಡಿಸಿ ತಮಾಷೆ ನೋಡುತ್ತಾನೆ.

ನೀನೂ ಅವನ್ನು ನೋಡಿ ನಗುವೆಯ? ಅವನು ನಿನ್ನ ಭಕ್ತ. ಏನು ಮಾಡಿದರೂ ಸರಿಯೆ. ಹಾಗಾದರೆ ನಮಗೂ ನಿನ್ನ ಭಕ್ತಿ ನೀಡು. ಮನ್ಮಥನ ಕಾಟದಿಂದ ನಾವು ದಾರಿ ತಪ್ಪದಂತೆ ನೋಡಿ ಕೊಳ್ಳು.

**ಅಹಿರಾಜಶಯ್ಯ** ನೀನು ಆದಿಶೇಷನ ಮೈಯ ಮಿದು ಹಾಸಿಗೆಯ ಮೇಲೆ ಸಿರಿದೇವಿಯೊಡನೆ ಸುಖವಾಗಿ ಮಲಗಿರು ವಾಗಲೆ ನಿನ್ನನ್ನು ಬೇಡುತ್ತಿದ್ದೇನೆ. ನೀನು ವ್ಯಗ್ರಚಿತ್ತನಾಗಿರು ವಾಗ ನಾನೇನಾದರೂ ಬೇಡುವುದಿಲ್ಲ, ಕಾಡುವುದಿಲ್ಲ. ದೇವ ಪಾಲಿಸು. ನಿನ್ನಂಥ ಆನಂದಮಯ ಜಗನ್ಮೋಹನ ಮೂರ್ತಿ ಯನ್ನು ಹೊರುವ ಭಾಗ್ಯ ಆ ಶೇಷನಿಗೆ ದೊರಕಿತೆಂದು ನಾನು ಮತ್ಸರ ಪಡುವುದಿಲ್ಲ. ಏಕೆಂದರೆ ಆತ ಹಿಂದಿನ ಕಲ್ಪದಲ್ಲಿ ರುದ್ರ ಪದವಿಯಲ್ಲಿದ್ದು ನಿನ್ನ ಪಾದೋದಕವಾದ ಗಂಗೆಯನ್ನು ತಲೆ ಯಲ್ಲಿ ಹೊತ್ತಿದ್ದ. ರಾಮನಾಮಾಮೃತವನ್ನು ಕಿವಿಯಿಂದ ಕೇಳಿ ಸದಾ ಸವಿಯುತ್ತಿದ್ದ. ಮನಸ್ಸಿನಿಂದ ತಾರಕ ಬ್ರಹ್ಮರೂಪಿಯಾದ ರಾಜೀವಲೋಚನನಾದ ನಿನ್ನ ಶ್ರೀರಾಮರೂಪವನ್ನು ಸತತ ಧ್ಯಾನಿ ಸುತ್ತ ರಾಮಷಡಕ್ಷರ ಮಂತ್ರವನ್ನು ಜಪಿಸುತ್ತಿದ್ದ. ಕಾಶೀ ಪಟ್ಟ ಣದ ಬೀದಿಬೀದಿಗಳಲ್ಲಿ ಜಟಾಧಾರಿಯಾಗಿ ತಿರುಗುತ್ತ, ಸಾಯುವ ಪ್ರಾಣಿಗಳ ಕಿವಿಯಲ್ಲಿ ಆ ಮಂತ್ರವನ್ನು ಉಸುರುತ್ತಿದ್ದ —

'ಪಾಯಂ ಪಾಯಂ ಶ್ರುತಿಚುಲುಕಿತಂ ರಾಮನಾಮಾ-
ಮೃತಂ ಯತ್
ಧ್ಯಾಯಂ ಧ್ಯಾಯಂ ಮನಸಿ ಸತತಂ ಬ್ರಹ್ಮ ತತ್ತಾರಕಾಖ್ಯಂ ।
ಜಾಪಂ ಜಾಪಂ ಪ್ರಕೃತಿವಿಕೃತೌ ಪ್ರಾಣಿನಾಂ ಕರ್ಣಮೂಲೇ
ವೀಥ್ಯಾಂ ವೀಥ್ಯಾಮಟತಿ ಜಟಿಲಃ ಕೋಽಪಿ ಕಾಶೀನಿವಾಸಿ ॥'

ಹೀಗೆ ಪವಿತ್ರ ಗಂಗಾಜಲದಿಂದಲೂ ದಿವ್ಯ ರಾಮನಾಮ ಜಪದಿಂದಲೂ ಪುನೀತನಾಗಿ ಈ ಕಲ್ಪದಲ್ಲಿ ಆದಿಶೇಷನಾಗಿ ಜನಿಸಿದನು. ತಿರುಗಿ ತಪಸ್ಸು ಮಾಡಿ ಶಯ್ಯೆ, ಆಸನ, ಛತ್ರ, ಪಾದುಕೆಗಳೆಂಬ ನಾಲ್ಕು ರೂಪದಿಂದ ನಿನ್ನನ್ನು ಸೇವಿಸುವ ಭಾಗ್ಯ ಪಡೆದನು. ಅದೂ ಸಾಲದೆ ಈಗ ಶೇಷಾಚಲದ ಅಭಿಮಾನಿ ದೇವತೆಯಾಗಿದ್ದು ನಿನ್ನನ್ನು ತಲೆಯ ಮೇಲೆ ಹೊತ್ತಿದ್ದಾನೆ.

'ಶೇಷೋ ಮಹತ್ತಪಸ್ತಪ್ತ್ವಾ ತ್ವಾಮಾರಾಧ್ಯ ಜಗತ್ಪತಿಂ।

ಶಯ್ಯಾಸನಂ ಪಾದುಕೇಚ ಹ್ಯಾತಪತ್ರಮಭೂತ್ತವ॥'

**ಶ್ರೀರಂಗ ವಿಟ್ಠಲ ದೊರೆಯೆ, ಪಾಲಿಸು.** ಅಂದು ನೀನು ಸ್ವಪ್ನದಲ್ಲಿ ಹೇಳಿದಂತೆ ನಾನು ಪಾಂಡುರಂಗ ಕ್ಷೇತ್ರಕ್ಕೆ ಹೋಗಿ ಚಂದ್ರಭಾಗಾನದೀ ಸ್ನಾನ ಮಾಡಿ ನಿನ್ನ ವಿಟ್ಠಲ ಮೂರ್ತಿಯ ದರ್ಶನ ಮಾಡಿ ನೀನು ಸ್ವಪ್ನದಲ್ಲಿ ತೋರಿಸಿದ್ದ ಸ್ಥಳವನ್ನು ಅಗೆಸಿದಾಗ ನಿನ್ನ ಪರಮಮಂಗಲ ರಂಗವಿಟ್ಠಲ ರೂಪಿನ ಪುಟ್ಟ ಶಿಲಾಮೂರ್ತಿಯೊಂದು ದೊರೆಯಿತು. ಆಗ ಆನಂದದಿಂದ ಪುಲಕಿತನಾಗಿ ಕಣ್ಣೀರು ಸುರಿಸಿದ್ದೆ ನಾನು. ನಾನು ನಿನ್ನ ಅನುಗ್ರಹ ಪಾತ್ರನಾದ 'ದಾಸ'ನೆಂದು ಅಂದೆ ತಿಳಿದು ಕೊಂಡೆ. ನಿನ್ನ ಅಂಕಿತದಲ್ಲಿ ಕೀರ್ತನೆಗಳನ್ನು ಹಾಡುತ್ತ ನಲಿದೆ.

ನರಹರಿತೀರ್ಥರು ಹಾಕಿ ಕೊಟ್ಟ ಹರಿದಾಸ ಮಾರ್ಗ ವನ್ನು ಇನ್ನಷ್ಟು ವಿಶಾಲಗೊಳಿಸುತ್ತ, ಪೂಜೆಯ ಕಾಲದಲ್ಲಿ ನಿನ್ನನ್ನು ಹಾಡಿ ಹೊಗಳುವುದಕ್ಕಾಗಿ ಭಜನ ಮಂಡಲಿ ಯೊಂದನ್ನು ಏರ್ಪಡಿಸಿ, ಅವರಿಂದಲೂ ಹಾಡಿಸಿದೆ. ಇದೊಂದು

ಹೊಸ ಪದ್ಧತಿಯೆಂದು ಕೆಲವರು ಅಂದುದುಂಟು. ಹೊಸದಾದ ರೇನಾಯಿತು? ಆನಂದದಿಂದ ನಾನೂ ಇತರರೊಂದಿಗೆ ಕಾಲಿಗೆ ಗೆಜ್ಜೆಕಟ್ಟಿಕೊಂಡು ಕುಣಿಯುತ್ತ ನಿನ್ನನ್ನು ಕೊಂಡಾಡುತ್ತಿದ್ದೇನೆ. ನನ್ನ ಆಪ್ತ ವಿದ್ಯಾಶಿಷ್ಯರಾದ ವ್ಯಾಸಯತಿಗಳೂ ಇದನ್ನು ಮೆಚ್ಚಿ ತಾವೂ ಕೀರ್ತನೆಗಳನ್ನು ರಚಿಸುತ್ತಿದ್ದಾರೆ. ಹೀಗೆ ಮನೆ ಮನೆ ಗಳಲ್ಲಿ ನಿನ್ನ ಶ್ರವಣಮಧುರ ನಾಮ ಸಂಕೀರ್ತನೆ ಮೊಳಗು ವಂತಾಗಲಿ, ಹೀಗೆ ನೀನು ನಮ್ಮನ್ನು ಪಾಲಿಸುತ್ತಿರು, ದೊರೆಯೆ, ಎಂದು ಬೇಡುತ್ತೇನೆ.



ರಮಾಪತಿಂ ಪೂರ್ಣಗುಣಂ ಮುಕುಂದಂ
ವ್ಯಾಸಂಚ ವಿಜ್ಞಾನ ಸಹಸ್ರ ಭಾನುಂ
ಪೂರ್ಣಪ್ರಭೋದಂ ಚ ಸುತತ್ವ ದೀಪಂ
ಕ್ರಮಾದ್ ಗುರೂಂಶ್ಚ ಪ್ರಣಮಾಮಿ ಮೂರ್ಧ್ನಾ ||

ಕಾಲೇ ಫಲತಿ ಸುರದ್ರುಃ ಚಿಂತಾಮಣಿರಪಿ ಯಾಚನೇ ದಾತಾ ।
ವರ್ಷತಿ ಸಕಲಮಭೀಷ್ಟಂ ದರ್ಶನಮಾತ್ರಾತ್ ಶ್ರೀಪಾದರಾಜಾಖ್ಯಃ ||

* * *

೨

ರಾಗ : ಪೂರ್ವಿಕಲ್ಯಾಣಿ—ಆದಿತಾಳ

ಶ್ರೀಶನೀನಹುದೋ । ಶೇಷಾಚಲ । ವಾಸ । ನೀ ನಹುದೋ ।

ಶೇಷಶಯನ ಸುರೇಶ ವಂದಿತಾ ಶೇಷಜನರನು ಪಾಲಿಸಿ ಬಡ್ಡಿ ।
ಕಾಸು ನೇರಿಸಿ ಗಂಟುಕಟ್ಟುವ ಕ್ಯಾಸಕ್ಕೀ ತಿಮ್ಮಪ್ಪ ನೀನೇ ॥

ತಂದೆ ನೀ ನಹುದೊ । ಕರುಣಾ । ಸಿಂಧು ನೀ ನಹುದೋ ।

ಅಂದು ನೃಪನ ನಂದನೆಯು ಎಳೆ ತಂದು ಘಾಸಿಯು ಮಾಡು
ತಿರಲು ಬಂದು ಅಕ್ಷಯವೆಂದು ಸಲಹಿದ ಮಂದಹಾಸ
ಮುಕುಂದ ನೀನೇ ॥

ಧೀರ ನೀ ನಹುದೊ । ಜಗದೋ । ದ್ಧಾರ ನೀ ನಹುದೋ

ಬಾರಿ ಬಾರಿಗೆ ನಿನ್ನ ಪಾದ ಸುವಾರಿಜಂಗಳ ಸೇರ್ದಭಕ್ತರ ।
ಘೋರ ದುರಿತವ ದೂರಗೈಸುವ ಮಾರಜನಕ ಅಪಾರಮಹಿಮ ॥

ಧನ್ಯ ನೀ ನಹುದೋ । ಸುರಮುನಿ । ಮಾನ್ಯ ನೀ ನಹುದೋ ।

ಪನ್ನಗಾರಿವಾಹನ ಧರೆಯೊಳು ಇನ್ನು ನಿನಗೆದುರಾರು ಕಾಣೆ
ಪ್ರಸನ್ನ ನಾಗೆಲೊ ಬಿನ್ನಪ ಕೇಳು ಪ್ರಪನ್ನ ವತ್ಸಲ ಶ್ರೀಹಯ
ವದನ ॥



ಶ್ರೀ ವಾದಿರಾಜರು ಈ ಕೀರ್ತನೆಯಲ್ಲಿ ತಿರುಪತಿಯ ಶ್ರೀನಿವಾಸನ ಮಹಿಮೆಗಳನ್ನು ಕೊಂಡಾಡಿದ್ದಾರೆ.

**ಶ್ರೀಶ ನೀ ನಹುದೋ.** ನೀನು ಶ್ರೀಶ, ಶ್ರೀದೇವಿಗೆ ಈಶ ಲಕ್ಷ್ಮೀಪತಿ 'ಶ್ರೀ' ದೇವಿಗೆ 'ಶ' ಅಂದರೆ ಸುಖವನ್ನು ಕೊಡ ಬೇಕೆಂದೆ ಸ್ವ ರಮಣನಾದ ನೀನು ಆ ದೇವಿಯನ್ನು ಆಲಂಗಿಸಿ ಕೊಳ್ಳುವೆ. ಲಕ್ಷ್ಮೀರಮಣನೆನಿಸುವೆ. ಅಂದು ಆ ಜಗನ್ಮಾತೆ ಕ್ಷೀರಸಾಗರದಿಂದ ಉದಿಸಿ ಬಂದೊಡನೆ ಅವಳ ಕೈಹಿಡಿದು ಪ್ರೀತಿ ಯಿಂದ ನಿನ್ನೆದೆಯಲ್ಲಿರಿಸಿಕೊಂಡೆ, ಶ್ರೀನಿವಾಸನೆನಿಸಿದೆ. ಆ ಪರಮ ಮಂಗಲ ವಿವಾಹಹೋತ್ಸವವನ್ನು ಹಾಡುವುದೆ ಪರಮಾನಂದ. ಅದಕ್ಕಾಗಿ ಲಕ್ಷ್ಮೀ ಶೋಭನ ಹಾಡನ್ನು ರಚಿಸಿದ್ದೇನೆ. ಅದರಲ್ಲಿ ಎಂಥ ಶಕ್ತಿ ಪ್ರಭಾವಗಳನ್ನು ನೀನು ತುಂಬಿದೆ, ದೇವ ! ಅಂದು ಜಹಗೀರುದಾರ ಅರಸಪ್ಪನಾಯಕನ ಮನೆಯಲ್ಲಿ ವಿವಾಹ ನಡೆ ಯುತ್ತಿದ್ದಾಗ ವರನು ಮದುವೆ ಮಂಟಪದಲ್ಲಿಯೇ ಹಾವು ಕಚ್ಚಿ ಮೂರ್ಛಿತನಾಗಿ ಬಿದ್ದ. ಎಲ್ಲ ಮಂತ್ರ ಔಷಧಿಗಳೂ ವ್ಯರ್ಥ ವಾದವು. ದೈವಾತ್ ಆಗ ಆ ಊರಲ್ಲಿದ್ದ ನನ್ನನ್ನು ನಾಯಕನು ಮೊರೆಹೊಕ್ಕನು. ನಿನ್ನ ನಾಮ ಸಂಕೀರ್ತನೆಗ ಸಂಸಾರವೆಂಬ ಮಹಾವಿಷವನ್ನೇ ಪರಿಹರಿಸುವ ಶಕ್ತಿ ಇರುವಾಗ ಹಾವಿನ ವಿಷಕ್ಕೆ ಏಕೆ ಅಂಜಬೇಕು ಎಂದು ಕೊಂಡು ನಾನು ವರನನ್ನು ತರಸಿದೆ. ತೊಡೆಯಮೇಲಿರಿಸಿಕೊಂಡೆ. ನಿನ್ನ ಪಾದೋದಕವನ್ನು ಅವನಿಗೆ ಪ್ರೋಕ್ಷಿಸಿದೆ. ಲಕ್ಷ್ಮೀ ಶೋಭನ ಪದವನ್ನು ಹಾಡಿದೆ. ಒಡನೆ ವಿಷವೆಲ್ಲ ಮಾಯವಾಯಿತು. ನಿದ್ದೆಯಿಂದ ಎಚ್ಚತ್ತವನಂತೆ ವರನು ಎದ್ದು ಕುಳಿತ. ಇದೇನು ಸ್ವಪ್ನವೋ ಇಂದ್ರಜಾಲವೊ ಎಂದು ಜನರು ಉದ್ಗರಿಸಿದರು! ನನ್ನ ಪೂರ್ವಾಶ್ರಮದ ತಂಗಿಯ ಗಂಡನ ಅಪಮೃತ್ಯುವನ್ನು ಈ ಹಾಡು ಪರಿಹರಿಸಿತು ! ಶ್ರೀದೇವಿಯ ಕಲ್ಯಾಣದ ಕಥೆಯನ್ನು ಹಾಡಿದಾಗಲೆ ಸಕಲ ಸಂಪತ್ತನ್ನು ಕೊಡುವ ನಿನಗೆ ಶ್ರೀದೇವಿಯಲ್ಲಿ ಎಷ್ಟು ಪ್ರೇಮ !!

ಶೇಷಾಚಲವಾಸ ನೀನಲ್ಲವೇ? ಅಂದು ಭೃಗು ಮುನಿ ನಿನ್ನ ಹಿರಿಮೆಯನ್ನು ಲೋಕಕ್ಕೆ ತೋರಿಸುವ ಉದ್ದೇಶದಿಂದ ನಿನ್ನೆದೆಗೆ ಒದ್ದನಂತೆ. ಲಕ್ಷ್ಮೀ ಮುನಿಸಿಕೊಂಡು ವೈಕುಂಠವನ್ನೇ ತೊರೆದು ಹೋದಾಗ ನೀನೂ ಆ ಸ್ಥಳವನ್ನೊಲ್ಲದೆ ಭೂಲೋಕವಲ್ಲಿ ಅಲೆಯುತ್ತ ಬಂದೆ. ಶೇಷಾಚಲದಲ್ಲಿ ನಿಂದೆ. ಇದೊಂದು ಲೀಲೆ. ಪದ್ಮಾವತೀ ಕಲ್ಯಾಣಕ್ಕಾಗಿ ಹೂಡಿದ ತಂತ್ರವೆ ಹೊರತು ಬೇರೇನಲ್ಲ. ಏಕೆಂದರೆ ಭೃಗುಮುನಿಯ ಪಾದ ಸ್ಪರ್ಶವಾದೊಡನೆ ನಿನ್ನೆದೆಯಲ್ಲಿ ಲಕ್ಷ್ಮಿ ಸ್ಥಿರವಾಗಿ ನಿಂತಳಂತೆ.

'ಅದ್ಯಾಹಂ ಭಗವಲ್ಲಕ್ಷ್ಮ್ಯಾ ಆಸಮೀಕಾಂತ ಭಾಜನಂ ।

ವತ್ಸ್ಯತ್ಯುರಸಿ ಮೇ ಭೂತಿಃ ಭವತ್ಪಾದ ಹತಾಂಹಸಃ ॥

ಎಂದು ನೀನೆ ಹೇಳಿರುವೆ. ಅಂತೂ ವೈಕುಂಠವನ್ನು ತೊರೆದರೂ ಅಲ್ಲಿ ಹಾಸಿಗೆಯಾಗಿ ಸೇವಿಸುತ್ತಿದ್ದ ನಿನ್ನ ಪ್ರಿಯಭಕ್ತನಾದ ಶೇಷನನ್ನು ಬಿಟ್ಟಿರಲಾರದೆ ಶೇಷಾಚಲವಲ್ಲಿಯೆ ನಿಂತೆ! ಎಲ್ಲಿದ್ದರೂ ನೀನು ಶೇಷಶಯನನೆ !

ಶೇಷಾಚಲದ ತುದಿಯಲ್ಲಿ ನಿಂತರೆ ಅಲ್ಲಿಯೂ ನೀನು ಸುರೇಶ ವಂದಿತನಾಗಿರುವೆ. ಸ್ವಯಂ ಬ್ರಹ್ಮದೇವನೆ ಪ್ರತಿದಿನ ನಿನ್ನ ಅರ್ಚನೆ ತಪ್ಪದೆ ಮಾಡುತ್ತಾನೆ. ಎಲ್ಲ ದೇವತೆಗಳೂ ನಿನಗೆ ವಂದನೆ ಸಲ್ಲಿಸುತ್ತಾರೆ. ಅವರ ಪ್ರಾರ್ಥನೆಯಂತೆ ಅಶೇಷ ಜನರನ್ನು ಪಾಲಿಸುವೆ. ಈ ನಡುವೆ ಕುಬೇರನ ಸಾಲದ ಬಡ್ಡಿ ತೀರಿಸುವುದಕ್ಕಾಗಿ ಕಾಸಿಗೆ ಕಾಸು ಸೇರಿಸಿ ಗಂಟುಕಟ್ಟಿ

ನೀನು ಮಾತ್ರ ಕೆಂಪಕ್ಕಿಯ ಅನ್ನ ಉಣ್ಣುತ್ತ ಶ್ರೀಮಂತನಾಗುತ್ತಿರುವೆ, ಮಹಾಲೋಭಿ. ಇದೂ ಒಂದು ಲೀಲೆ, ವಸ್ತುತ: ನೀನುಣ್ಣುವುದು ಎಲ್ಲ ವಸ್ತುಗಳ ಸಾರಭಾಗವನ್ನು ಮಾತ್ರ

'ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್'

'ಹರಿಯು ಸಾರಭಾಗವನ್ನೇ ಉಣ್ಣುತ್ತಾನೆ ನಿಃಸಾರವಾದುದನ್ನಲ್ಲ,' ಎನ್ನುತ್ತಾರೆ. ನೀನು ಭಕ್ತರಿಂದ ಒಂದು ಚಿಕ್ಕಾಸೂ ಬಿಡದೆ ಹಣವನ್ನು ಕಿತ್ತುಕೊಳ್ಳುವವನೆಂದುಮೂ ಹಾಸ್ಯಕ್ಕಾಗಿ ಹೇಳಿದ ಮಾತು. ನೀನು ಹಣವನ್ನು ದೋಚುತ್ತಿಲ್ಲ. ಅನೇಕ ಜನ್ಮಗಳ ಪಾಪಗಳನ್ನು ದೋಚುತ್ತಿರುವೆ.

ನನ್ನ ಈ ಹಾಸ್ಯದ ಮಾತಿನಲ್ಲಿ ಕೊಂಕು ಇಲ್ಲ. ನಿನ್ನ ವಿಚಿತ್ರ ಲೀಲೆಯ ಪ್ರಶಂಸೆ ಇದೆ. ಇಂಥ ಹಾಸ್ಯವನ್ನು ದೊಡ್ಡವರಲ್ಲಿಯೂ ಮಾಡಬೇಕು.

'ಗುರುಣಾಪಿ ಸಮಂ ಹಾಸ್ಯಂ ಕರ್ತವ್ಯಂ ಕುಟಿಲಂ ವಿನಾ'

ಎಂದು ಹೇಳುತ್ತಾರೆ.

ತಿಮ್ಮಪ್ಪ, ತಿರುಮಲೆಯಲ್ಲಿ ನೆಲೆಸಿದ ನಮ್ಮಪ್ಪ, ಶ್ರೀವತ್ಸ ಚಿಹ್ನೆಯನ್ನು ಎದೆಯಲ್ಲಿ ಧರಿಸಿದ ನೀನು ಶ್ರೀಶನೆ ಹೊರತು ಸುಬ್ರಹ್ಮಣ್ಯನಾಗಲಿ ವೀರಭದ್ರನಾಗಲಿ ಇನ್ನಾರಾಗಲಿ ಅಲ್ಲ. ಅವರು ಪ್ರತಿ ದಿನದಲ್ಲಿಯೂ ರಾತ್ರಿಯ ವೇಳೆ ಬ್ರಹ್ಮನು ಸ್ವತಃ ತನ್ನ ಕೈಗಳಿಂದ ಸಲ್ಲಿಸುವ ಪೂಜೆಗೆ ಅರ್ಹರೂ ಅಲ್ಲ. ನೀನಾದರೊ ಸಮಸ್ತ ಲೋಕಕ್ಕೂ ತಂದೆ, ಸಮಸ್ತ ಲೋಕವನ್ನುದ್ಧರಿಸುವ ಕರುಣಾಸಿಂಧು. ಲೋಕದಲ್ಲಿ ತಂದೆ ತಾಯಿ ಗಳೆನಿಸಿದವರ

ಕರುಣೆಗೆ ಮಿತಿಯುಂಟು. ಶಿಶು ಪ್ರಹ್ಲಾದನನ್ನು ಆದಾವ ತಂದೆ ಕಾಪಾಡಿದ ? ಹಸುಳೆ ಧ್ರುವರಾಯನನ್ನು ಯಾವ ತಂದೆ ಸಂತೈಸಿದ ? ಅಂದು ದ್ರುಪದನ ನಂದನೆಯನೆಳೆತಂದು ಘಾಸಿಯು ಮಾಡುತಿರಲು ಬಂದು ಅಕ್ಷಯವೆಂದು ಸಲಹಿ ದವನಾರು ? ದ್ರುಪದ ಮಹಾರಾಜನ ಕುವರಿ, ಮೂಲೋಕದ ಗಂಡುಗಳೆಂದು ಪ್ರಸಿದ್ಧರಾದ ಪಂಚಪಾಂಡವರ ಪಟ್ಟ ಮಹಿಷಿ. ಆಕೆ ಏನಿದ್ದರೂ ಹೆಣ್ಣು. ತುಂಬಿದ ರಾಜ ಸಭೆಯಲ್ಲಿ ಅವಳ ಮಾನಭಂಗಕ್ಕೆಳೆಸಿದ ಆ ನೀಚ.—ಅವನ ಹೆಸರನ್ನು ಉಸುರಲೂ ಹೇಸುತ್ತೇನೆ. ಆಗ 'ಅಕ್ಷಯ' ಎನ್ನುತ್ತ ಅಕ್ಷಯವಸನ ವನ್ನಿತ್ತು ಮಾನ ರಕ್ಷಣೆಗೆ ಒದಗಿ ಬಂದವನು ನೀನು. ಮಂದಹಾಸ ದಿಂದ ಭಕ್ತರನ್ನು ಆನಂದಗೊಳಿಸುವ ಮುಕುಂದ ನೀನು. ದ್ರೌಪದಿಗೆ, ಪಾಂಡವರಿಗೆ, ಇನ್ನೆಷ್ಟೋ ಭಕ್ತ ಜನರಿಗೆ ಆಪತ್ತುಗ ಳಿಂದ ಮುಕ್ತಿ ನೀಡಿ ಮುಕುಂದನೆನಿಸಿರುವೆ ನೀನು. ಸಂಸಾರವೆಂಬ ಘೋರ ಆಪತ್ತಿನಿಂದ ಮುಕ್ತಿಕೊಡಬಲ್ಲ ನಿನಗೆ ಬೇರೆ ಆಪತ್ತು ಗಳಿಂದ ಮುಕ್ತಿ ಕೊಡುವುದು ಅದೇನು ದೊಡ್ಡ ಕೆಲಸವೆ ? ಹೀಗೆ ಲೋಕಕ್ಕೆ ಅಭಯ ನೀಡುವ ನೀನು ತಂದೆ ಎನಿಸುವುದು ಉಚಿತವೆ. ಹುಟ್ಟಿಸಿದವನೊಬ್ಬನೆ ತಂದೆಯಲ್ಲ. ಉಪನಯನ, ವಿದ್ಯಾದಾನ, ಅನ್ನದಾನ, ಅಭಯದಾನಗಳನ್ನು ಮಾಡು ವವರೂ ತಂದೆಗಳೆ.

'ಜನಿತಾ ಚೋಪನೇತಾ ಚ ಯಶ್ಚ ವಿದ್ಯಾಂ ಪ್ರಯಚ್ಛತಿ ।
ಅನ್ನದಾತಾ ಭಯತ್ರಾತಾ ಪಂಚೈತೇ ಪಿತರಃ ಸ್ಮೃತಾಃ ॥

ಆದ್ದರಿಂದಲೆ ವೇದದ ಋಷಿಗಳು ಹೀಗೆ ನಿನ್ನನ್ನು ಬೇಡುತ್ತಾರೆ—

'ಸನಃ ಪಿತೇವ ಸೂನವೇಽಗ್ನೇ ಸೂಪಾಯನೋಭವ ।'

**ಧೀರ ನೀನಹುದೊ, ಜಗದುದ್ಧಾರನೀನಹುದೋ**

ಸಮಸ್ತ ಜಗತ್ತನ್ನೆ ಉದ್ಧರಿಸಬಲ್ಲ ಧೀರ ನೀನೆ. ಬ್ರಹ್ಮರುದ್ರರಂಥ ದೇವಾಧಿದೇವರು ದೈತ್ಯರಿಗೆ ವರವಿತ್ತರೆ ನೀನೊಬ್ಬನೆ ಧೈರ್ಯ ದಿಂದ ಆ ದೈತ್ಯರನ್ನೆದಿರಿಸಿ ಒರೆಸಿ ದೈತ್ಯಾರಿ ಎನಿಸಿರುವೆ. ದೈತ್ಯರ ಉಪಟಳದಿಂದ ಜಗತ್ತನ್ನು ಕಾಪಾಡಿ ಜಗದುದ್ಧಾರಕನೆನಿಸಿರುವೆ.

ಭೃಗುಮುನಿ ನಿನ್ನ ಅಂತಃಪುರವನ್ನು ಪ್ರವೇಶಿಸಿ ನಿನ್ನೆದೆಗೆ ಒದ್ದಾಗಲೂ ಮನಃಸ್ಥೈರ್ಯ ಕಳೆದುಕೊಳ್ಳದೆ ಶಾಂತಚಿತ್ತನಾಗಿ ಮುನಿಯನ್ನು ಪೂಜಿಸಿದ ಧೀರ ನೀನು.

ವಿಕಾರಹೇತೌ ಸತಿ ವಿಕ್ರಿಯಂತೇ
ಯೇಷಾಂ ನ ಚೇತಾಂಸಿ ತ ಏವ ಧೀರಾಃ

ಮನಸ್ಸು ವಿಚಲಿತವಾಗಲು ಸಾಕಷ್ಟು ಕಾರಣಗಳಿದ್ದರೂ ಯಾರು ಮನಃ ಸ್ಥೈರ್ಯ ಕಳೆದುಕೊಳ್ಳರೊ ಅವರೆ ನಿಜವಾದ ಧೀರರು' ಎನ್ನುತ್ತಾನೆ ಕಾಳಿದಾಸ. ಇಂಥ ಮನಸ್ಥೈರ್ಯ ಆತ್ಮಬಲ ಉಳ್ಳವರು ತಾವು ಆಪತ್ತುಗಳಿಂದ ದೂರವಿದ್ದು ಉಳಿದವರನ್ನು ದೂರವಿರಿಸಬಲ್ಲರು.

ಇಕ್ಕೆಲದ ಸೇನೆಗಳ ತುಮುಲದ ನಡುವೆ ಬಂಧು-ವ್ಯಾಮೋಹ ದಿಂದ ಕುರುಡಾಗಿ ನಿಂತ ಅರ್ಜುನನಿಗೆ ಉಪನಿಷತ್ತಿನ ಜ್ಞಾನವನ್ನು ಉಪದೇಶಿಸಿದ ಧೀರ ನೀನು. ಕರ್ತವ್ಯ ಮಾರ್ಗದಲ್ಲಿ ಅವನನ್ನು ಮುನ್ನಡೆಸಿದ ಗುರು ನೀನು.

ಧಿಯಾ ರಮಂತೇ ಇತಿ ಧೀರಾಃ

ಇಂಥ ನೀನು ಜಗತ್ತಿಗೆ ಉದ್ಧಾರಕನಲ್ಲವೆ ಇನ್ನೇನು ? ಗೀತೆ

ಅರ್ಜುನನಿಗೆಂದೇ ಹೊರಟಿರುವುದಿಲ್ಲ. ಅರ್ಜುನನು ನೆಪ ಮಾತ್ರ. ಜಗತ್ತನ್ನೆ ಗೀತೆಯ ಸಂದೇಶದಿಂದ ಎಚ್ಚರಿಸಿ ಉದ್ಧರಿಸುವವ ನೀನು.

**ಬಾರಿ ಬಾರಿಗೆ ನಿನ್ನ ಪಾದ ಸುವಾರಿಜಂಗಳ ಸೇರ್ದ ಭಕ್ತರ ಘೋರದುರಿತವ ದೂರಗೈಸುವವ ನೀನು.** ಭೃಗು ಮುನಿ ನಿನ್ನ ಪಾದ ಕಮಲಗಳನ್ನೆ ಸದಾ ನಂಬಿದ ಮಹಾಭಕ್ತ, ಜ್ಞಾನಿ, ತಪಸ್ವಿ ಆದರೂ ಪ್ರಾರಬ್ಧ ಯಾರನ್ನು ಬಿಟ್ಟಿಲ್ಲ.

'ಯಥಾಧೇನು ಸಹಸ್ರೇಷು ವತ್ಸೋ ವಿಂದತಿ ಮಾತರಂ !
ತಥಾ ಶುಭಾಶುಭಂ ಕರ್ಮ ಕರ್ತಾರಮನುಗಚ್ಛತಿ |'

ಸಾವಿರ ದನಗಳ ಹಿಂಡಿನಲ್ಲಿ ಕರು ತನ್ನ ತಾಯಿಯನ್ನು ಕಂಡು ಕೊಂಡು ಹಿಂಬಾಲಿಸುವಂತೆ ಪುಣ್ಯ ಪಾಪಗಳೂ ಆ ಕರ್ಮಗಳ ಕರ್ತಾರನನ್ನು ಹಿಂಬಾಲಿಸುತ್ತವೆ. ಆದ್ದರಿಂದ ಭೃಗುಮುನಿ ನಿನ್ನೆದೆಗೆ ಒದ್ದ, ನಿನ್ನ ಹಿರಿಮೆ ಲೋಕಕ್ಕೆ ತಿಳಿಯಲೆಂದು. ಅವನು ನಿರೀಕ್ಷಿಸಿದ್ದಂತೆ ನೀನು ಕೋಪವನ್ನು ಗೆದ್ದ ಮಹಾ ಪುರುಷನೆ ಆಗಿದ್ದೆ. ತ್ರಿಗುಣಾತೀತ ಸರ್ವಶಕ್ತನಾದ ನಿನ್ನಲ್ಲಿ ಕೋಪ ತಾಪಗಳೂ, ಮನೋದೌರ್ಬಲ್ಯಗಳಿಗೆ ಅವಕಾಶವಿಲ್ಲ. ಏನಿದ್ದರೂ ನಿನ್ನಪಾದ ಕಮಲಗಳ ಭಕ್ತನು ನಿನ್ನೆದೆಗೆ ಪಾದ ಪ್ರಹಾರ ಮಾಡಿದುದು ಘೋರ ಕರ್ಮ. ಪುಣ್ಯಬೀಜ ಪಾಪ ಒಂದು ಮುನಿಯನ್ನು ಹಿಂಬಾಲಿಸಿತ್ತು. ಮುಂದೆ ಬೇಡನ ಜನ್ಮ. ನಿನ್ನ ದಯೆಯಿಂದ ನಿನ್ನ ಧ್ಯಾನದ ಆನಂದಕ್ಕೆ ಕುಂದಿಲ್ಲ. ತನ್ನ ಜಾತಿಗೆ ಸಹಜವಾದ ಬೇಟೆಯನ್ನೇನೊ ಮಾಡು ತ್ತಲೆ ಇದ್ದ. ಆಗ ಕೃಷ್ಣಾವತಾರ ಸಮಾಪ್ತಿ ಕಾಲ ಕೆಂದಾವರೆ

ಯಂಥ ನಿನ್ನ ಪಾದಗಳಿಗೆ ಬೇಡಸು ಬಾಣವನ್ನೆಸೆದ. ಯಾವುದೋ ಒಂದು ಪ್ರಾಣಿ ಎಂಬ ಭ್ರಮೆ ಆತನಿಗೆ. ನಿನ್ನ ಕಂಡ ಮೇಲೆ 'ತಿರುಗಿ ಮಹಾಪರಾಧ ಮಾಡಿದೆನೆ' ಎಂದು ಪಶ್ಚಾತ್ತಾಪದ ಕಣ್ಣೀರ ಕೋಡಿ ಹರಿಸಿದ. ತನ್ನನ್ನು ಕೊಲ್ಲೆಂದು ಅಂಗಲಾಚಿದ. ನೀನು ಕ್ಷಮಾಸಮುದ್ರ. ದೇವಲೋಕದಿಂದ ವಿಮಾನ ತರಿಸಿ ಅವನನ್ನು ಸ್ವರ್ಗಕ್ಕೆ ಕಳಿಸಿದೆ.

'ಸ್ವಪಾದ ಮೂಲಂ ಭಜತಃ ಪ್ರಿಯಸ್ಯ
ತ್ಯಕ್ತಾನ್ಯಭಾವಸ್ಯ ಹರಿಃ ಪರೇಶಃ ।
ವಿಕರ್ಮ ಯಚ್ಯೋತ್ಪತಿತಂ ಕಥಂಚಿತ್
ಧುನೋತಿ ಸರ್ವಂ ಹೃದಿ ಸನ್ನಿವಿಷ್ಟಃ ॥

'ಪರಮೇಶ್ವರನಾದ ಶ್ರೀಹರಿ ತನ್ನ ಪ್ರಿಯ ಭಕ್ತರು ಅನನ್ಯ ಭಾವದಿಂದ ಅವ ಪಾದಗಳನ್ನಾಶ್ರಯಿಸಿದರೆ ಅವನು ಅವರ ಹೃದಯದಲ್ಲಿ ನೆಲೆಸುತ್ತಾನೆ. ಅವರು ಮಾಡಬಹುದಾದ ಎಲ್ಲ ಪಾಪಗಳನ್ನು ಪರಿಹರಿಸುತ್ತಾನೆ' ಎಂಬ ಪ್ರಶಂಸೆಯನ್ನು ಅಕ್ಷರಶಃ ನಿಜಗೊಳಿಸಿದೆ.

**ಮಾರಜನಕ**, ನಿನ್ನ ಮಗನ ಶೌರ್ಯ ಪ್ರತಾಪಗಳನ್ನು ಹೇಳತೀರದು. ವೇದಾಭ್ಯಾಸಜಡನೆಂದು ಕೆಲವರಿಂದ ಗೇಲಿ ಮಾಡಿಸಿಕೊಂಡಿರುವ ವೃದ್ಧಪಿತಾಮಹ ಬ್ರಹ್ಮದೇವನೂ ಆಗ ತಾನೇ ಜನಿಸಿದ ತನ್ನ ಮಾನಸ ಪುತ್ರಿಯನ್ನು ಕಾಮಿಸಿದನಂತೆ! ಮನ್ಮಥ ಪ್ರಣಯಿಗಳಿಬ್ಬರ ಎರಡು ಹೃದಯ ಒಂದಾಗಿ ಮಾಡಲೂ ಬಲ್ಲ, ಶತ್ರುಗಳ ಒಂದು ಹೃದಯ ಭೇದಿಸಿ ಎರಡಾಗಿ

ಮಾಡಲೂ ಬಲ್ಲ. ತಾನು ಹುಟ್ಟಿದ ಮರುಕ್ಷಣವಲ್ಲಿಯೆ ತನ್ನ ಪ್ರತಾಪವನ್ನೆಲ್ಲ ತೋರಬಲ್ಲ. ಕೃಷ್ಣಾವತಾರ ಕಾಲದಲ್ಲಿ ನೀನು ಜರಾಸಂಧನ ಕಡೆಯಲ್ಲಿ ಯುದ್ಧಮಾಡುತ್ತಿದ್ದ ಏಕಲವ್ಯನಿಗೆ ತಕ್ಕಶಾಸ್ತಿಮಾಡಲು ರಣರಂಗದಲ್ಲಿ ನಿನ್ನ ಶರೀರದಿಂದಲೆ ಮನ್ಮಥ ನನ್ನು ಹುಟ್ಟಿಸಿದೆ. ಆತ ಪ್ರದ್ಯುಮ್ನನಾಗಿ ಹುಟ್ಟಿದೊಡನೆ ಏಕಲವ್ಯನನ್ನು ಬೆನ್ನಟ್ಟಿ ಹೋಗಿ ಸೋಲಿಸಿ ತಿರುಗಿ ನಿನ್ನ ಹೊಟ್ಟೆ ಯನ್ನು ಸೇರಿಕೊಂಡ. ಇನ್ನೊಮ್ಮೆ ಬದರಿಕಾಶ್ರಮದಲ್ಲಿದ್ದ ವಕ್ರಾಸುರನನ್ನು ಕೊಲ್ಲಲು ಪದ್ಯುಮ್ನ ಜನಿಸಿ ತಕ್ಷಣದಲ್ಲಿಯೆ ಅವನನ್ನು ಅವನು ವಾಸಿಸುತ್ತಿದ್ದ ಅರಣ್ಯ ಸಮೇತವಾಗಿ ಸುಟ್ಟು ಬೂದಿ ಮಾಡಿದ. ತಿರುಗಿ ನಿನ್ನ ಹೊಟ್ಟೆಯನ್ನು ಸೇರಿದ. ಮೂರನೆ ಬಾರಿ ಶಂಬರಾಸುರನನ್ನು ಕೊಲ್ಲಲು ಪ್ರದ್ಯುಮ್ನನನ್ನು ನೀನು ಹುಟ್ಟಿಸಿದೆ, ರುಕ್ಮಿಣಿಯ ಗರ್ಭದಲ್ಲಿ. ಈ ಸಂದರ್ಭದಲ್ಲಿ ನೀನು ಪುತ್ರಲಾಭಕ್ಕಾಗಿ ಶಿವನನ್ನಾರಾಧಿಸಿದವನಂತೆ ನಟಿಸಿದೆ. ಶಿವನೆ ಕಳಿಸಿದ್ದ ಘಂಟಾಕರ್ಣರೆಂಬ ಪಿಶಾಚಗಳಿಗೆ ಮೋಕ್ಷವೆಂಬ ಪರಮ ಪುರುಷಾರ್ಥವನ್ನಿತ್ತು 'ಐಹಿಕ ಪಶುಪುತ್ರಾದಿ ಪುರುಷಾರ್ಥಗಳಿ ಗಾಗಿ ಶಿವನಂಥ ಯಾವ ದೇವತೆಯನ್ನು ಬೇಡಬಹುದು, ಮುಕ್ತಿ ಗಾಗಿ ಮಾತ್ರ ನಿನ್ನನ್ನೆ ಬೇಡಬೇಕೆಂದು' ನಿನ್ನ ಅಪಾರ ಮಹಿಮೆ ಯನ್ನು ತೋರಿದೆ. ಬಾರಿ ಬಾರಿಗೆ ಘಂಟಾಕರ್ಣರಂತೆ ನಿನ್ನ ಪಾದಸುವಾರಿಜಂಗಳ ಸೇರ್ದ ಭಕ್ತರ ಸಂಸಾರವೆಂಬ ಘೋರ ದುರಿತವನ್ನೆ ದೂರಗೈಸುವ ಅಪಾರ ಮಹಿಮ ನೀನು. ಆ ಘಂಟಾ ಕರ್ಣರು ಎರಡು ಕಿವಿಗಳಿಗೂ ಘಂಟೆಕಟ್ಟಿಕೊಂಡು ನಿನ್ನ ಹೊರತು ಇನ್ನೊಬ್ಬರ ಸ್ತುತಿ ಕಿವಿಗೆ ಬೀಳುವಾಗಲೆಲ್ಲ ತಲೆ ಯಾಡಿಸುತ್ತ ಘಂಟೆಗಳ ಸದ್ದನ್ನು ಹೊರಡಿಸುತ್ತಿದ್ದರಂತೆ !

**ಧನ್ಯ ನೀ ನಹುದೊ,**

ಸೃಷ್ಟಿಸ್ಥಿತಿಶ್ಚ ಸಂಹಾರೋ
ನಿಯತಿ ರ್ಜ್ಞಾನಮಾವೃತಿಃ
ಬಂಧ ಮೋಕ್ಷೌ ಚ ಪುರುಷಾತ್
ಯಸ್ಮಾತ್ ಸ ಹರಿರೇಕರಾಟ್ ||'

ಎಂಬಂತೆ ಜಗತ್ತಿನ ಸೃಷ್ಟಿಸ್ಥಿತಿಲಯ ಮುಂತಾದ ನಿನ್ನೆಲ್ಲ ಕಾರ್ಯಗಳು ನಿನ್ನಿಚ್ಛೆಯಂತೆಯೆ ಕಾಲಕಾಲಕ್ಕೆ ನಡೆಯುತ್ತಿರುವುದರಿಂದ ನೀನು ಧನ್ಯ, ಸತ್ಯ ಸಂಕಲ್ಪ.

**ಸುರಮುನಿ ಮಾನ್ಯ ನೀನಹುದೋ**

'ಯಜ್ಞೇನ ಯಜ್ಞಮಯಜಂತ ದೇವಾಃ' ಸೃಷ್ಟಿಯ ಆದಿಯಲ್ಲಿ ದೇವತೆಗಳೆಲ್ಲ ಯಜ್ಞದಿಂದ ನಿನ್ನನ್ನಾರಾಧಿಸಿದರು. ಆದ್ದರಿಂದ ಯಜ್ಞಗಳಲ್ಲ ಮಾನ್ಯರಾದ ಸುರರಿಗೆ ಮಾನ್ಯ ನೀನು. ವೇದಗಳಲ್ಲಿ ಸ್ತೋತ್ರ ಮಾಲ್ಪಡುವ ಅಗ್ನಿ ಇಂದ್ರ ಮುಂತಾದ ದೇವತೆಗಳಲ್ಲೆಲ್ಲ ನೀನೆ ಮಾನ್ಯ. ಅಗ್ನಿ ಇಂದ್ರ ಮುಂತಾದವರನ್ನು ಕೆಲವೆ ಸೂಕ್ತಗಳು ಸ್ತೋತ್ರ ಮಾಡಿದರೆ ನಿನ್ನನ್ನು ಸಮುಸ್ತವೇದಗಳೂ ಹೊಗಳುತ್ತವೆ.

'ಸರ್ವೇ ವೇದಾ ಯತ್ಪದ ಮಾಮನಂತಿ'

ವೇದಗಳು ಮಾತ್ರವಲ್ಲ, ಇತಿಹಾಸ ಪುರಾಣಗಳೂ ಹೊಗಳುವುದು ನಿನ್ನನ್ನೆ.

'ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ |
ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ||'

ಆದ್ದರಿಂದ ದೇವತೆಗಳಲ್ಲೆಲ್ಲ ನೀನೆ ಮಾನ್ಯ. ಹೀಗೆ ಸುರ ಮಾನ್ಯ ನಾದ ನೀನು ಮುನಿಮಾನ್ಯನೂ ಆಗಿರುವೆ. ಸೃಷ್ಟಿಯ ಆದಿಯಲ್ಲಿ ಮುನಿಗಳಿಗೆ ಎಲ್ಲ ವೇದಗಳನ್ನೂ ಉಪದೇಶಿಸಿದವ ನೀನು ಮುನಿ ಗಳಿಗೆ ಮಾನ್ಯ ಮುನಿಗಳಲ್ಲೆಲ್ಲ ಮಾನ್ಯನೂ ನೀನೆ ಬೇರೆ ಎಲ್ಲ ಮುನಿಗಳೂ ಕೆಲವು ಮಂತ್ರಗಳಿಗೆ ದ್ರಷ್ಟಾರರು, ನೀನು ಸಮಸ್ತ ವೇದಗಳಿಗೂ ದ್ರಷ್ಟಾರ.

'ಋಷಿಶ್ಚ ದೇವಶ್ಚೈಕೋಽಹಂ ತಾರಾದೀನಾಂ ವಿಶೇಷತಃ ।

ಎಂದು ನೀನೆ ಹೇಳಿರುವೆ. ಹೀಗೆ ಸುರ ಮುನಿಗಳಿಗೆ ಮಾನ್ಯ, ಸುರ–ಮುನಿಗಳಲ್ಲಿ ಮಾನ್ಯ. ನೀನೊಬ್ಬನೆ.

ಲೋಕದ ಎಲ್ಲ ಚೇತನ ಅಚೇತನಗಳಿಗಿಂತಲೂ ಉತ್ತಮನು ನೀನಾಗಿರುವುದರಿಂದಲೂ ನೀನು ಧನ್ಯ. ಆದ್ದರಿಂದಲೆ ಸುರ ಮುನಿ ನಾರದರು ನಿನ್ನನ್ನು ಧನ್ಯ ಆಶ್ಚರ್ಯ ಎನ್ನುತ್ತ ಮಾನಿಸಿ ದರು. ಅಂದು ಕೃಷ್ಣಾವತಾರ ಕಾಲದಲ್ಲಿ ನೀನು ಸಮುದ್ರದ ನಡುವೆ ಸಂಪತ್ತಿನಿಂದ ತುಂಬಿ ತುಳುಕುವ ದ್ವಾರಕಾ ಪುರಿಯನ್ನು ನಿರ್ಮಿಸಿಕೊಂಡು ಪ್ರದ್ಯುಮ್ನ ಸಾಂಬರಂಥ ಶೂರರಾದ ಸಾವಿರಾರು ಮಕ್ಕಳನ್ನು ಪಡೆದು ದೇವರಾಜನೂ ಅಂಜುವಷ್ಟು ಬಲಶಾಲಿ ಯಾಗಿ ಮೆರೆಯುತ್ತಿದ್ದೆ. ಜಗತ್ತಿನ ಎಲ್ಲ ರಾಜರೂ ದುರ್ಯೋಧನನ ಒಂದು ಯಜ್ಞದಲ್ಲಿ ಪಾಲುಗೊಳ್ಳಲು ಬಂದಾಗ ಅವರೆಲ್ಲರೂ ಪರಸ್ಪರ ನಿನ್ನ ಬಗ್ಗೆಯೆ ಮಾತನಾಡಿಕೊಂಡರು. ನಿನ್ನ ಬಲ, ಪ್ರತಾಪ, ಐಶ್ವರ್ಯಗಳನ್ನು ಕಣ್ಣಾರೆ ಕಾಣ ಬಯಸಿ ದ್ವಾರಕೆಗೆ ಬಂದರು. ರೈವತಕ ಪರ್ವತದಲ್ಲಿ ಬೀಡುಬಿಟ್ಟರು. ಆಗ ಅಲ್ಲಿ ನೀನು ಆ ಎಲ್ಲ ರಾಜರುಗಳ ನಡುವೆ ರುಕ್ಮಿಣೀ ಸಮೇತನಾಗಿ

ರತ್ನ ಸಿಂಹಾಸನದ ಮೇಲೆ ಮಂಡಿಸಿದೆ. ಆಕಾಶದಿಂದ ಸುರಮುನಿ ನಾರದರು ಬಂದಿಳಿದು. ಕೃಷ್ಣ, ನೀನು ಆಶ್ಚರ್ಯ ಧನ್ಯ ಎಂದರು. 'ಹೌದು, ಆದರೆ ದಕ್ಷಿಣಾಸಮೇತನಾಗಿ' ಎಂದೆ ನೀನು. ರಾಜರುಗಳಿಗೆ ಇದೊಂದು ಒಗಟಾಯಿತು. ನಿನ್ನ ಅಪ್ಪಣೆ ಪಡೆದು ನಾರದರೆ ಹೇಳಿದರು. 'ರಾಜರುಗಳೆ, ನಾನೊಂದು ದಿನ ಎಂದಿನಂತೆ ಗಂಗಾಸ್ನಾನ ಮಾಡುತ್ತಿದ್ದಾಗ ನದಿಯಲ್ಲಿ ಆಶ್ಚರ್ಯ ಧನ್ಯ ಎಂದು ಉದ್ಗಾರ ಮಾಡಿದೆ. ಆಮೆ ಹೇಳಿತು, 'ನನ್ನಂಥ ಪ್ರಾಣಿಗಳು ಲೆಕ್ಕವಿಲ್ಲದಷ್ಟಿವೆ ಈ ನದಿಯಲ್ಲಿ'. ಆಗ ನಾನು ನದಿಯನ್ನೆ ಪ್ರಶಂಸಿಸಿದೆ, ಆಶ್ಚರ್ಯ ಧನ್ಯ ಎಂದೆ. ಗಂಗೆಯೂ ಈ ಪ್ರಶಂಸೆಯನ್ನು ಒಪ್ಪಿಕೊಳ್ಳಲಿಲ್ಲ. ನನ್ನಂಥ ಸಾವಿರಾರು ನದಿಗಳಿಗಾಶ್ರಯ ನೀಡುವವನು ಸಮುದ್ರ ಎಂದಳು, ಆಕೆ. ನಾನು ಸಮುದ್ರನನ್ನೇ ಹೊಗಳಿದೆ. 'ನನಗೂ ಆಶ್ರಯ ನೀಡುವವಳು ಪೃಥಿವಿ' ಎಂದನು ಸಮುದ್ರ. ಪ್ರಥಿವಿಯೂ ಹೇಳಿದಳು 'ನನಗೆ ಆಧಾರ ಪರ್ವತಗಳು' ಪರ್ವತಗಳು ಹೇಳಿದುವು, 'ನಮ್ಮನ್ನೆಲ್ಲ ಸೃಷ್ಟಿಸಿದ ತಂದೆ ಬ್ರಹ್ಮದೇವ. ಬ್ರಹ್ಮದೇವನೂ ನನ್ನ ಪ್ರಶಂಸೆಯನ್ನು ಒಪ್ಪಿಕೊಳ್ಳಲಿಲ್ಲ. 'ನನ್ನ ತಪಸ್ಸು ವಿದ್ಯೆ ಎಲ್ಲವೂ ವೇದಗಳು ಮಾಡಿದ ಅನುಗ್ರಹ' ಎಂದನಾತ. ವೇದಗಳೂ ಹೇಳಿದುವು, 'ನಮ್ಮ ಅಸ್ತಿತ್ವಕ್ಕೆ ಸಾಫಲ್ಯ ಬರುವುದು ಯಜ್ಞಗಳಿಂದ'. ಯಜ್ಞಗಳೂ ಹೇಳಿದುವು, 'ನಾವಿರುವುದು ವಿಷ್ಣುಪ್ರೀತಿಗಾಗಿ' ಆದ್ದರಿಂದ ನಾನು ವಿಷ್ಣುವಿನ ಬಳಿಗೆ ಹೊರಟೆ. ಅವನೆ ಕೃಷ್ಣನಾಗಿ ಅವತರಿಸಿ ಇಲ್ಲಿ ಕುಳಿತಿರುವುದರಿಂದ ಇಲ್ಲಿಗೇ ಬಂದು ಹೇಳಿದೆ, 'ಕೃಷ್ಣ, ನೀನೆ ಆಶ್ಚರ್ಯ ಧನ್ಯ' ಕೃಷ್ಣನು ಒಪ್ಪಿಕೊಂಡ. ಆದರೆ ಒಂದು ಮಾತನ್ನು ಸೇರಿಸಿದ, 'ದಕ್ಷಿಣಾಸಮೇತನಾಗಿ' ಎಂದು. ಕೃಷ್ಣನ ಪಟ್ಟದ ರಾಣಿಯಾದ ಈ ರುಕ್ಮಿಣೀ ದೇವಿಯು ಯಜ್ಞಗಳಲ್ಲಿ

ಕೊಡುವ ದಕ್ಷಿಣೆಗೆ ಅಭಿಮಾನಿನಿಯಾದ ಲಕ್ಷ್ಮೀಯ ಅವತಾರ. ವಿಷ್ಣುವಿನ ಶರೀರದಲ್ಲಿ ಎಡಭಾಗದ ಒಂದು ಅರ್ಧವನ್ನು ಆಕ್ರಮಿಸಿ ಅರ್ಧನಾರೀಶ್ವರರೆಳಿನಿಸಿದವಳು, ನಿಜವಾಗಿಯೂ ಅರ್ಧಾಂಗಿನಿ,

'ಅರ್ಧನಾರೀ ನರತ್ವೇನ ಯದಾಭರ್ತ್ರಾಸಹಸ್ಥಿತಾ
ತದೋತ್ತಮಾ ದಕ್ಷಿಣಾವತಿ'

ಇಂಥ ದಕ್ಷಿಣಾದೇವೀಸಮೇತನಾದ ವಿಷ್ಣುವೇ ಲೋಕದ ಆಶ್ಚರ್ಯ ವಸ್ತುಗಳಲ್ಲೆಲ್ಲ ಆಶ್ಚರ್ಯ ಧನ್ಯರಲ್ಲೆಲ್ಲ ಧನ್ಯ.

ಹೀಗೆ ನೀನು ಧನ್ಯನೂ ಅಹುದು; ಧನ್ಯನೆಂದು ಸುರ ಮುನಿಯಿಂದ ಮಾನ್ಯನೂ ಅಹುದು.

**ಪನ್ನಗಾರಿ ವಾಹನ,** ಹಾವುಗಳಿಗೆ ವೈರಿಯಾದ ಗುರುಡನು ನಿನ್ನ ವಾಹನ. ಅವನನ್ನೇರಿ ನೀನು ಯುದ್ಧಕ್ಕೆ ಹೊರಟೆ ಎಂದರೆ ಶತ್ರುಗಳು ಗರುಡನನ್ನು ಕಂಡ ಹಾವು ಗಳಂತಾಗುತ್ತಾರೆ. ಶೌರ್ಯದಲ್ಲಿ ನಿನಗೆದುರಾರೂ ಕಾಣೆ. ಆದ್ದ ರಿಂದಲೆ ನಾರದರು ನಿನ್ನನ್ನು ಧನ್ಯನೆಂದು ಹೊಗಳಿದುದನ್ನು ಕೇಳಿ ಕುಂತಿ ನಿನ್ನ ಹಿರಿಮೆಯನ್ನು ಪ್ರತ್ಯಕ್ಷ ತೋರಿಸೆಂದು ಬೇಡಿ ದಾಗ ನೀನು ಎಲ್ಲ ರಾಜರನ್ನು ಯುದ್ಧದ ಪಂದ್ಯಕ್ಕೆ ಆಹ್ವಾನಿಸಿ ಕ್ಷಣಮಾತ್ರದಲ್ಲಿ ಅವರೆಲ್ಲರನ್ನು ಸೋಲಿಸಿದೆ.

ಶೌರ್ಯದಲ್ಲಿಯೋ ಏಕೆ ಸೌಂದರ್ಯ, ಔದಾರ್ಯ, ಗಾಂಭೀರ್ಯಗಳಂಥ ಯಾವ ಗುಣದಲ್ಲಿಯೂ ನಿನಗೆದುರಾರು ಕಾಣೆ ನಿನಗೆ ಸಮಾನವಾದ ಸ್ಥಾನಮಾನಗಳನ್ನು ಊರ

ದೇವತೆಗಳಿಗೆಂದೂ ನೀಡಲಾರೆ

ಯೇ ಸಮಾನಂ ಪ್ರಪಶ್ಯತಿ ಹರೇ ರ್ವೈ ದೇವತಾಂತರಂ
ತೇ ಯಾಂತಿ ನರಕಾನ್ ಘೋರಾನ್

ಏಕೆಂದರೆ ಬೇರೆ ದೇವತೆಗಳು ಐಹಿಕ ಸಂಪತ್ತನ್ನು ಮಾತ್ರ ನೀಡ ಬಲ್ಲರು ನೀನು ಮೋಕ್ಷದಾತ. ಆದ್ದರಿಂದಲೆ ಕಸ್ಮೈದೇವಾಯ ಹವಿಷಾವಿಧೇಯ' ಯಾವ ದೇವನಿಗೆ ಹವಿಸ್ಸನ್ನು ನೀಡಿ ಆರಾಧಿಸಲಿ ಎಂದು ಶ್ರುತಿಯಲ್ಲಿ ವಿಚಾರಮಾಡಿ ನಿನಗೇ ಎಲ್ಲ ಪೂಜ ಸಲ್ಲಬೇಕಾದುದೆಂದು ತೀರ್ಮಾನ ಮಾಡಲಾಗಿದೆ.

**ಎನ್ನ ಬಿನ್ನಪ ಕೇಳು ಪ್ರಸನ್ನನಾಗು** ನೀನೊಲಿದೆ ಎಂದರೆ ಏನು ಸಿಗದು? 'ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ ?

ವಸ್ತುತಃ ನೀನೊಲಿದೆ ಎಂದರೆ ನಮಗಿನ್ನೇನು ಬೇಕು ? ಏನು ಬೇಡಬೇಕು ? ಏನು ಬೇಡಿದರೂ ಅದು ದಿಲ್ಲಿರಾಯನ ಬಳಿ ಹುಲ್ಲು ಬೇಡಿದಂತಾಗುವುದು. ಆದ್ದರಿಂದ ನನಗೆ ನಿನ್ನೊಲಿಮೆಯೊಂದೇ ಬೇಕು.

**ಪ್ರಸನ್ನವತ್ಸಲ**

ಸಕೃದೇವ ಪ್ರಪನ್ನಾಯ ತವಾಸ್ಮೀತಿ ಯಾಚತೇ
ಅಭಯಂ ಸರ್ವಭೂತೇಭ್ಯೋ ದ ದಾಮ್ಯೇತದ್ವ್ರತಂ ಮಮ!!

ಭಕ್ತನು ಒಮ್ಮೆ ನನ್ನನ್ನು ಮೊರೆಹೊಕ್ಕು 'ನಾನು ನಿನ್ನವನೆಂದು' ಯಾಚಿಸಿದರೆ ಸಾಕು, ಅವನಿಗೆ ಎಲ್ಲ ರೀತಿಯ ಅಭಯ ನೀಡು

ವೆನು. ಇದು ನನ್ನ ವ್ರತ' ಎಂದು ಘೋಷಿಸಿದವ ನೀನು. ಶರಣುಹೊಂದಿದವರನ್ನು ತಾಯಿ ತನ್ನ ಎಳೆ ಕಂದನನ್ನು ನೋಡಿ ಕೊಳ್ಳುವಂತೆ ನೋಡುವೆ.

'ಪ್ರಪನ್ನಾನ್ ವತ್ಸವತ್ ಲಾತೀತಿ ಪ್ರಪನ್ನ ವತ್ಸಲಃ'

ಮಾತೃವಾತ್ಸಲ್ಯವನ್ನೆ ತೋರುವ ನಿನ್ನಲ್ಲಿ ನಾವು ಏನಾದರೂ ಬೇಡ ಬೇಕಾಗಿದೆಯೆ ? ತಾಯಿಯ ಎದೆ ಹಾಲು ಇರುವುದು. ಕಂದನಿಗಾಗಿಯೆ ಅಲ್ಲವೆ ?

ಶ್ರೀಹಯವದನ ನನ್ನ ಪ್ರೀತಿಯ ಆರಾಧ್ಯ ದೈವವೆ, ಅಂದು ಬ್ರಹ್ಮನ ಸೃಷ್ಟಿ ಕಾರ್ಯಗಳಲ್ಲೆಲ್ಲ ಅವನಿಗೆ ಕಣ್ಣಿನಂತಿದ್ದ ವೇದವನ್ನು ಮಧುಕೈಟಭರು ಅಪಹರಿಸಿದಾಗ,

ವೇದಾಮೇ ಪರಮಂ ಚಕ್ಷುರ್ವೇದಾಮೇ ಪರಮಂಬಲಂ
ಅಂಧಕಾರ ಹಿ ಮೇ ಲೋಕಾ ಜಾತಾ ವೇದೈರ್ವಿನಾಕೃತಾಃ ॥

ವೇದಗಳೆ ನನ್ನ ಕಣ್ಣು ಅವೇ ನನ್ನ ಬಲ, ವೇದವಿಲ್ಲದ ಈ ಲೋಕವೆಲ್ಲ ನನಗೆ ಅಂಧಕಾರಮಯ' ಎನ್ನುತ್ತ ಬ್ರಹ್ಮನು ನಿನ್ನನ್ನು ಶರಣು ಹೊಂದಿದಾಗ ನೀನು ಹಯಗ್ರೀವ ರೂಪದಿಂದ ಬಂದು ಆ ದಾನವರನ್ನು ಕೊಂದು ವೇದಗಳನ್ನು ತಂದಿತ್ತೆ. ಪ್ರಪನ್ನವತ್ಸಲನೆಂಬ ನಿನ್ನ ಬಿರುದನ್ನು ಮೆರೆದೆ. ಇಂಥ ನಿನ್ನ ಹಯವದನ ಮೂರ್ತಿಯ ಅನುಗ್ರಹ ಸಜ್ಜನರೆಲ್ಲರಿಗೂ ದೊರಕು ವಂತಾಗಲೆಂದು ಹಯವದನ ಅಂಕಿತದಲ್ಲಿಯೇ ಹಾಡುಗಳನ್ನು ಇತರರಿಂದ ಹಾಡಿಸುತ್ತಿದ್ದೇನೆ. ನಿನ್ನ ದಾಸರ ಪಂಥವನ್ನು ಶ್ರೀಮಂತಗೊಳಿಸುತ್ತಿದ್ದೇನೆ, ಅದರಲ್ಲಿಯೇ ಅಪಾರ ಸುಖ ಕಾಣುತ್ತಿದ್ದೇನೆ.

ರಾಗ : ಯದುಕುಲ ಕಾಂಬೋಧಿ ತ್ರಿಪುಟ ತಾಳ.

ಸಾರಿದೆನೊ ನಿನ್ನ ವೆಂಕಟರನ್ನ ಕಾಯಬೇಕೆನ್ನ
ನೀರಜನಯನನಿರ್ಮಲಗುಣರನ್ನ
ಅನಾಥನು ನಾನು ದೀನರಕ್ಷಕ ನೀನು
ನಿನ್ನವನೆಂದುನೋಡು ನೀನಾಗಿದಯಮಾಡು ॥

ಎನ್ನ ಕುಂದುಗಳನ್ನು ಎಣಿಸಲಾಗದು ದೇವ,
ಪನ್ನಗಶಯನನೆ ಪರಮಪುರುಷ ಹರಿಯೇ
ದೇಶದೇಶದವರ ಪೊರೆವಂತೆ ಪೊರೆ ಎನ್ನ
ಶೇಷಾಚಲ ಘನ್ನ ಶ್ರೀಶ ಹಯವದನ ॥

ಶ್ರೀವಾದಿರಾಜರು ಈ ಕೀರ್ತನೆಯಲ್ಲಿ ತಿರುಪತಿಯ ಶ್ರೀನಿವಾಸನನ್ನು ಹೀಗೆ ಪ್ರಾರ್ಥಿಸಿದ್ದಾರೆ—

**ಸಾರಿದೆನೊ ನಿನ್ನ, ವೆಂಕಟರನ್ನ, ಕಾಯಬೇಕೆನ್ನ**

ಹೇ ಶ್ರೀನಿವಾಸ, ನೀನು ವೆಂಕಟರತ್ನ, ಅಂದರೆ, ಜನರ ಪಾಪಪರಿಹಾರಕ ಅಮೂಲ್ಯರತ್ನ. ದೇವಲೋಕದ ಚಿಂತಾಮಣಿ ಪುಣ್ಯವಂತರಾದ, ಸ್ವರ್ಗಲೋಕನಿವಾಸಿಗಳಿಗೆ ಬೇಡಿದುದನ್ನು ಕೊಟ್ಟೀತು. ಪಾಪಮಾಡಿ ಈ ಭೂಮಿಯಲ್ಲಿ ಬಳಲುವ ಮಾನವನಿಗೆ ಅದರಿಂದ ಯಾವ ಉಪಕಾರವೂ ಇಲ್ಲ. ನೀನು ಪಾಪಪರಿಹರಿಸುವಿ. ಮನೆಯಲ್ಲಿ ಆರಾಧ್ಯದೈವವಾಗಿ ಅಮೂಲ್ಯ ರತ್ನವಾಗಿ ನಿಲ್ಲುವಿ. ಪಾಪಪರಿಹರಿಸುವುದರಿಂದ ವೆಂಕಟನೆನಿಸು

ವಂತೆ ಅಮೃತ ಐಶ್ವರ್ಯಗಳನ್ನು ನೀಡುವುದರಿಂದಲೂ ನಿನಗೆ ಆ ಹೆಸರು ಒಪ್ಪುತ್ತದೆ.

'ವೆಂಕಾರೋಽಮೃತ ಬೀಜಂಸ್ಯಾತ್
ಐಶ್ವರ್ಯಂ ಕಟಮುಚ್ಯತೇ ।
ಅಮೃತೈಶ್ವರ್ಯ ದೇವತ್ವಾದ್
ವೇಂಕಟೇಶಂ ಹರಿಂ ವಿದುಃ॥

ಅಥವಾ ಪಾಪಪರಿಹಾರಕವಾದ ವೇಂಕಟಗಿರಿಯ ಶಿರೋರತ್ನವೆ ನೀನು. ಆದ್ದರಿಂದಲೆ ಗಿರಿಯು ಪಾಪಪರಿಹಾರಕವಾಗಿದ್ದು ವೇಂಕಟವೆನಿಸಿತು. ವಸ್ತುತಃ ನೀನು ಗಿರಿಯ ಶಿರೋರತ್ನ ಮಾತ್ರವಲ್ಲ, ಗಿರಿಯ ಕಲ್ಲು ಮುಳ್ಳುಗಳ ಎಲ್ಲ ಕಣ ಕಣಗಳಲ್ಲಿಯೂ ನೀನು ನನಗೆ ಕಾಣುತ್ತಿರುವೆ. ಕೇವಲ ಗುಡಿಯ ಒಳಗೆ ಮಾತ್ರವಲ್ಲ ಆದ್ದರಿಂದ ಬೆಟ್ಟದ ಕಲ್ಲುಮಣ್ಣು ಎಲ್ಲವೂ ಪಾಪಪರಿಹಾರಕ, ವೇಂಕಟಬೆಟ್ಟವನ್ನು ನಾನು ಮೊಣಕಾಲಿಂದಲೆ ಹತ್ತಿಬಂದೆ, ಸೋಪಾನದ ಕಲ್ಲಿನಲ್ಲೆಲ್ಲ ನೀನೆ ಕಾಣುತ್ತಿದ್ದರೆ, ಎಲ್ಲವೂ ಸಾಲಿಗ್ರಾಮ ಶಿಲೆಯಾಗಿಯೆ ಕಂಡು ಬಂದರೆ, ನಾನೆಲ್ಲಿ ಕಾಲಿಡಲಿ' ಜನರಿಗೆ ಕಾಲ್ನಡೆಯಿಂದ ಬೆಟ್ಟ ಹತ್ತುವುದು ಪ್ರಯಾಸದ ಕೆಲಸ. ಇನ್ನು ಮೊಣಕಾಲಿಂದ ಹತ್ತುವ ಮಾತು ದೂರವೆ ಉಳಿಯಿತು. ಆದರೆ ನನಗೆ ಹಾಗೆನಿಸಲಿಲ್ಲ. ಏಕೆಂದರೆ ಬೆಟ್ಟದ ಅಡಿಯಿಂದ ಮುಡಿವರೆಗೂ ಸೋಪಾನದಲ್ಲೆಲ್ಲ ನಿನ್ನ ಮಂಗಳ ಮೂರ್ತಿಯ ದರ್ಶನ ದೊರೆಯುತ್ತಿದ್ದುದರಿಂದ ಆಯಾಸವೆ ಇರಲಿಲ್ಲ, ಮಾತ್ರವಲ್ಲ ಆನಂದ ಹೆಚ್ಚುತ್ತಿತ್ತು. ಇಂಥನಿನ್ನ ಬಳಿಸಾರಿದ್ದೇನೆ, ನೀ ಎನ್ನ ಕಾಯಬೇಕೆಂದು.

**ನೀರಜನಯನ,** ಕಮಲದಂತೆ ಸರಸ ಸುಂದರ ಕಣ್ಣುಗಳು ನಿನ್ನವು. ಭಕ್ತರಾದ ನಾವೆಲ್ಲ ನಿನ್ನ ಮಕ್ಕಳೆಂದ ಮೇಲೆ ನಿನ್ನ ಕಣ್ಣು ನಮ್ಮ ಕಡೆಗೆ ಹೀಗೇ, ಸರಸ ಸುಂದರವಾಗಿಯೆ ಇರಬೇಕಲ್ಲವೆ ? ಕಣ್ಣು ನಾಕು ಬಗೆಯದು, ದೃಷ್ಟಿ ನಾಲ್ಕು ವಿಧವಂತೆ :—

'ನೇತ್ರಂ ಚತುರ್ವಿಧಂ ಪ್ರೋಕ್ತಂ ||'

ಉಜ್ಜ್ವಲಂ ಮಿತ್ರ ಸಂಯೋಗೇ
ಸರಸಂ ಪುತ್ರದರ್ಶನೇ ।
ವಕ್ರಂಚ ಕಾಮಿನೀಯೋಗೇ
ಆರಕ್ತಂ ಶತ್ರುದರ್ಶನೇ ||

ಸ್ನೇಹಿತನನ್ನು ಕಂಡಾಗಆನಂದದಿಂದ ಹೊಳೆಯುತ್ತದೆ. ಮಗನನ್ನು ಕಂಡಾಗ ಪ್ರೇಮದಿಂದ ರಸಪೂರ್ಣವಾಗುತ್ತದೆ. ಪ್ರೇಯಸಿಯನ್ನು ಕಂಡಾಗ ಓರೆನೋಟ ಬೀರುತ್ತದೆ. ವೈರಿಯನ್ನು ಕಂಡಾಗ ಕೆಂಪಾಗುತ್ತದೆ

ಆದ್ದರಿಂದ ನಾವು ನಿನ್ನ ಮಕ್ಕಳಾದ ಭಕ್ತರು ಬಯಸುವುದು ನಿನ್ನ ಸರಸದೃಷ್ಟಿಯೊಂದನ್ನೆ. ಸರಸದೃಷ್ಟಿ ಬೀರುವ ನಿನ್ನ ಮೋಹನ ರೂಪು ಕಣ್ಣಮುಂದೆ ಸದಾ ಇರಬೇಕು. ನಿರ್ಮಲ ಗುಣರತ್ನಗಳಿಂದ ತುಂಬಿದ ನೀನು ನಮ್ಮ ಹೃದಯದಲ್ಲಿ ನಲಿಯುತ್ತಿರಬೇಕು. ಈ ವಿಷಯದಲ್ಲಿ ನಾನು ಕಡು ಲೋಭಿ ಎಂದರೂ ಸರಿಯೆ. ಆದ್ದರಿಂದಲೆ ನಾನು ನಿನ್ನ ದರ್ಶನಕ್ಕೆ ಬಂದಾಗ ಗುಡಿಯ ಅಧಿಕಾರಿಗಳು ತಡೆದರೂ ನಾನು ಹಿಂತಿರುಗಲಿಲ್ಲ. ಗುಡಿಯ ಉತ್ತರ ಭಾಗದಲ್ಲಿ ಕುಳಿತು ನಿನ್ನನ್ನೆ ಧ್ಯಾನಿ

ಸಿದೆ. ಆಗ ಗೋಪುರದ ಒಂದು ಪುಟ್ಟ ವಿಗ್ರಹದಲ್ಲಿ ನೀನು ಕಂಡುಬಂದೆ. ವಿಮಾನ ಶ್ರೀನಿವಾಸನೆಂದು ಪ್ರಸಿದ್ಧನಾದೆ. ಭಕ್ತರು ತರುವ ನೈವೇದ್ಯವನ್ನು ನಿನಗೆ ಅರ್ಪಿಸಲು ಗುಡಿಯಲ್ಲಿ ವೈಖಾನಸಾಗಮವು ಅವಕಾಶಕೊಡದಿದ್ದರೂ ವಿಮಾನ ಶ್ರೀನಿವಾಸನ ರೂಪದಲ್ಲಿ ಆ ಅವಕಾಶವನ್ನು ಅಂದಿನಿಂದ ನಮಗೆ ನೀನೆ ಕೊಟ್ಟೆ ಬಳಿಕ ಮಹಾಂತನ ಕೈಯಿಂದ ನನಗೆ ಗೌರವ ಕೊಡಿಸಿದೆ. ನನ್ನ ಕೈಯಿಂದ ತಂತ್ರಸಾರಾಗಮ ರೀತಿಯ ಪೂಜೆಯನ್ನು ಕೈಗೊಂಡೆ. ನಾನು ಅರ್ಪಿಸುವ ದಿವ್ಯ ಸಾಲಿಗ್ರಾಮ ಮಾಲಿಕೆ ಯನ್ನು ಸ್ವೀಕರಿಸಿ ಪ್ರೀತಿಯ ಕಂಠಾಭರಣವನ್ನಾಗಿ ಮಾಡಿ ಕೊಂಡೆ. ಭಕ್ತರ ಕೈಯಿಂದ ಎಷ್ಟೋ ಪೂಜೆಯನ್ನೂ ಆನಂದ ದಿಂದ ಸ್ವೀಕರಿಸುವಿ. ಅದಕ್ಕೆ ಎಷ್ಟು ಅನಂತ ಫಲವನ್ನು ಕೊಡುವಿ.

## ಅನಾಥನು ನಾನು ದೀನರಕ್ಷಕ ನೀನು

ಶ್ರೀನಿವಾಸ, ನನಗೆ ನಿನ್ನ ಹೊರತು ಇನ್ನಾರೂ ರಕ್ಷಕನಿಲ್ಲ. ನೀನೆ ರಕ್ಷಕ. ಅನಾಥನು ನಾನು, ಎರಡು ರೀತಿಯಿಂದ. 'ಅ' ಎನಿಸಿಕೊಂಡ ನೀನು ನನಗೆ ನಾಥ ಬೇರೆ ನಾಥರು ನನಗೆ 'ಅ' ಎಂದರೆ ಇಲ್ಲ. ಹೀಗೆ ನಾನು ಅನಾಥನಾದರೆ, ನೀನು ದೀನ ರಕ್ಷಕ ಎಷ್ಟೊಂದು ಅಂತರ ! ಆದರೆ ಈ ಅಂತರ ನಮ್ಮನ್ನು ದೂರ ಮಾಡುವಂತಹುದಲ್ಲ, ಬೆಸುಗೆಯಂತೆ ನಮ್ಮಿಬ್ಬರ ನ್ನೊಂದಾಗಿಸುವಂತಹುದು. ನೀನು ದೀನರಕ್ಷಕನೆಂಬುದು ನಿನ್ನ ಅನಂತಾವತಾರಲೀಲೆಗಳನ್ನು ಕಂಡಾಗಲೇ ತಿಳಿದು ಬರು ವುದು. ದುಷ್ಟರ ಸಂಹಾರಕ್ಕೆ ನೀನು ಅವತಾರವೆತ್ತ ಬೇಕಾಗಿಲ್ಲ.

ನಮಗೆ ದಿವ್ಯ ಜೀವನದ ಆದರ್ಶಗಳನ್ನು ತೋರಿ ಮಾರ್ಗದರ್ಶನ ಮಾಡಲೆಂದು ಅವತಾರವೆತ್ತುವೆ. ಇದುವೆ ದೀನ ರಕ್ಷಣೆ.

'ನ ದೇವಾ ಯಷ್ಟಿಮಾದಾಯ ರಕ್ಷಂತಿ ಪಶುಪಾಲವತ್ !
ಯಂತು ರಕ್ಷಿತುಮಿಚ್ಛಂತಿ ಬುದ್ಧ್ಯಾ ಸಂಯೋಜಯಂತಿ ತಂ ॥

ದೇವತೆಗಳು ದನ ಮೇಯಿಸುವವರಂತೆ ಕೈಯಲ್ಲಿ ಕೋಲು ಹಿಡಿದು ನಮ್ಮನ್ನು ನೋಡಿಕೊಳ್ಳುವುದಿಲ್ಲ. ಯಾರನ್ನು ರಕ್ಷಿಸ ಬೇಕೆಂದು ಸಂಕಲ್ಪಿಸುವರೊ ಅವರ ಬುದ್ಧಿಗೇ ಸರಿಯಾದ ಪ್ರೇರಣೆ ನೀಡುವರು.

**ದೀನರಕ್ಷಕನು ನೀನೆ.** ಈ ಬಿರುದು ನಿನಗೇ ಒಪ್ಪುತ್ತದೆ. ಏಕೆಂದರೆ ನಿನ್ನ ಇಚ್ಛೆ ಇಲ್ಲದೆ ಒಂದು ಹುಲ್ಲು ಕಡ್ಡಿಯೂ ಚಲಿಸ ಲಾರದು ಕೇನೋಪನಿಷತ್ತಿನಲ್ಲಿ ಬರುವ ಯಕ್ಷನ ಕಥೆ ಇದಕ್ಕೆ ಉದಾಹರಣೆ. ನೀನು ಯಕ್ಷರೂಪದಿಂದ ಬಂದು ಒಂದು ಹುಲ್ಲು ಕಡ್ಡಿಯನ್ನು ದೇವತೆಗಳ ಮುಂದೆ ಇಟ್ಟರೆ ಅವರಾರೂ ಅದನ್ನು ಕದಲಿಸದೆ ಹೋದರು. ಇಂಥ ಸರ್ವಶಕ್ತನಾದ ನೀನೆ ಅಷ್ಟೇ ದಯಾಮಯನೂ ಹೌದು. 'ಮಮ ಪ್ರಾಣಾಹಿ ಪಾಂಡವಾಃ' ಎನ್ನುವವನು, ಭಕ್ತರೆಡೆಗೆ ತಾನಾಗಿಯೇ ಓಡೋಡಿ ಬರುವವನು, ನೀನು.

'ವೈಕುಂಠಂ ವಾ ಪರಿತ್ಯಕ್ಷ್ಯೇ ನ ಭಕ್ತಾಂಸ್ತ್ಯಕ್ತುಮುತ್ಸಹೇ ।

ವೈಕುಂಠವನ್ನಾದರೂ ಬಿಟ್ಟೇನು ಭಕ್ತರನ್ನು ಬಿಡಲಾರೆ ಎನ್ನುತ್ತ ಭಕ್ತರಿಗಾಗಿ ವೆಂಕಟಾಚಲಕ್ಕೆ ಬಂದು ನೆಲೆಸಿದ ಕರುಣಿ ವೆಂಕಟೇಶ ನೀನಲ್ಲವೆ ?

## ನಿನ್ನವನೆಂದು ನೋಡು ನೀನಾಗಿ ದಯೆಮಾಡು

ವೆಂಕಟೇಶ, ನಿನ್ನ ಲೀಲೆ ವಿಚಿತ್ರ. ಸಂಪತ್ತಿನ ಅಧಿದೇವತೆಯಾದ ಆ ಶ್ರೀದೇವಿ ನಿನ್ನ ಚರಣದಾಸಿ. ನೀನು ಹುಲು ಮಾನುಜರ ಕೈಯಿಂದ ಚಿಕ್ಕಾಸು ಕಸಿಯುವಿ, ಚಿಕ್ಕಾಸಿಗೂ ಬೆಟ್ಟದಷ್ಟು ಫಲ ನೀಡಲೆಂದೇ ಅಲ್ಲವೆ? ಭಕ್ತನೆಲ್ಲಿದ್ದರೂ ನಿನ್ನವನೆಂದು ನೋಡುವಿ, ನೀನಾಗಿ ದಯಮಾಡುವಿ. ಇಲ್ಲದಿದ್ದರೆ ನನ್ನಂಥ ಓರ್ವ ಭಿಕ್ಷುಕನ ಕೈಯಿಂದ ಕಡಲೆಯ ಮಡ್ಡಿಯುಂಡೆ ಮೆಲ್ಲಲು ಕುದುರೆಯಾಗಿ ಕುಣಿಯುತ್ತ ನನ್ನ ಹಿಂದೆ ಬರುತ್ತಿದ್ದೆಯಾ? ತಿರುಪತಿಯಲ್ಲಿ ನಿನ್ನ ಮೂಲಕ ವಿಗ್ರಹದ ಜೊತೆಗೆ ಅನಾದಿಕಾಲದಿಂದ ಪೂಜೆಗೊಳ್ಳುತ್ತಿದ್ದ ಶ್ರೀಭೂಸಮೇತ ಸ್ವರ್ಣಶ್ರೀನಿವಾಸ ವಿಗ್ರಹವನ್ನು ಗುಡಿಯ ಅಧಿಕಾರಿಗಳಿಂದ ನನಗೆ ಕೊಡಿಸುತ್ತಿದ್ದೆಯಾ? ಆ ವಿಗ್ರಹದಲ್ಲಿ ನಿನ್ನನ್ನು ಸೇವಿಸುವ ಭಕ್ತರಿಗೆ ತಿರುಪತಿಯಾತ್ರೆಯ ಫಲವನ್ನೇ ಕೊಡುವ ನಿನ್ನ ದಯೆಗೆ ಎಣೆಯುಂಟೆ? ಅಂದು ಸ್ವರ್ಣಕಾರನೊಬ್ಬನು ಗಣಪತಿ ವಿಗ್ರಹವನ್ನು ಮಾಡಲೆಂದು ಎರಕ ಹೊಯ್ಯುತ್ತಿದ್ದಾಗ ಅದು ಎಷ್ಟು ಮಾತ್ರಕ್ಕೂ ಹಯಗ್ರೀವ ವಿಗ್ರಹವಾಗಿಯೆ ಪರಿಣಮಿಸಿದುದರಿಂದ ಅವನು ಅದನ್ನು ನನಗೆ ತಂದು ಅರ್ಪಿಸಿದ. ಹೀಗೆ ನೀನು ನನ್ನನ್ನು ನಿನ್ನವನೆಂದು ನೋಡು, ನೀನಾಗಿ ದಯಮಾಡು. ನನ್ನೆಡೆಗೆ ದಯ ಮಾಡಿಸು, ನನ್ನಲ್ಲಿ ದಯೆ ಮಾಡು.

ಎನ್ನ ಕುಂದುಗಳನ್ನು ಎಣಿಸಲಾಗದು ದೇವ. ನಾನು ಪ್ರಾರಬ್ಧ ಕರ್ಮಗಳ ಹೊರೆ ಹೊತ್ತಿರುವದು ನಿಜ. ಆದರೆ ಅದನ್ನು ನಿನ್ನ ಸೇವೆಗೆ ಒದಗುವ ಅವಕಾಶವೆಂದು ನಾನು ತಿಳಿ

ದಿದ್ದೇನೆ. ಅವನ್ನು ಕುಂದೆಂದು ಎಣಿಸಬೇಡ. ನನ್ನನ್ನು ಕಡೆ ಗಣಿಸಬೇಡ. ನಾನು ಒಂದು ಕ್ಷಣವೂ ಬಿಡದೆ ನಿನ್ನನ್ನು ಸೇವಿಸುತ್ತಿದ್ದೇನೆ. ನಿನ್ನ ಸೇವೆಗಾಗಿ ನನ್ನ ಬಾಳನ್ನೆ ಮುಡಿಪಾಗಿಟ್ಟಿದ್ದೇನೆ.

ವಿಷ್ಣೋಃ ಸರ್ವೋತ್ತಮತ್ವಂ ಹಿ ಸರ್ವಥಾ ಪ್ರತಿಪಾದಯ ।

ಎಲ್ಲ ರೀತಿಯಿಂದಲೂ ವಿಷ್ಣು ಸರ್ವೋತ್ತಮತ್ವವನ್ನೆ ಸ್ಥಾಪಿಸು' ಎಂಬ ಮಾತನ್ನು ಅಕ್ಷರಶಃ ಪಾಲಿಸುತ್ತೇನೆ, ನಾನು. ಯುಕ್ತಿಮಲ್ಲಿಕೆ ನಂನ ಭಾರತೀ ವಿಲಾಸಗಳಂಥ ಸುಲಭ ಸುಬೋಧ ಗ್ರಂಥಗಳನ್ನು ರಚಿಸಿ ನಿನ್ನ ಮಹಿಮೆಯನ್ನು ಜನರಿಗೆ ಬೋಧಿಸುತ್ತೇನೆ. ರುಕ್ಮಿಣೀ ವಿಜಯವೆಂಬ ಸುಂದರ ಮಹಾಕಾವ್ಯವನ್ನು ರಚಿಸಿ ನಿನ್ನ ದಿವ್ಯಮಂಗಲ ಚರಿತ್ರೆಯನ್ನು ಹಾಡುತ್ತೇನೆ. ಕೇಳುವವರಿಗೆ ಆನಂದದಿಂದ ರೋಮಾಂಚನ ಉಂಟುಮಾಡುತ್ತೇನೆ. ಸಂಸ್ಕೃತದಲ್ಲಿಯೂ ದೇಶ ಭಾಷೆಯಲ್ಲಿಯೂ ಸ್ತೋತ್ರ ಪದ ಕೀರ್ತನೆಗಳನ್ನು ಹಾಡಿ ನಲಿಯುತ್ತೇನೆ. ಮನೆಮನೆಗಳಲ್ಲಿ ನಿನ್ನ ನಾಮಸಂಕೀರ್ತನೆ ಧ್ವನಿಸುವಂತೆ ಮಾಡುತ್ತೇನೆ. ಹೀಗಿದ್ದರೂ 'ಪಾಪೋಽಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪ ಸಂಭವ' ಎಂದು ಬ್ರಹ್ಮದೇವನೆ ಹೇಳುವಂತೆ ನಾನೂ ನನ್ನಲ್ಲಿ ಕುಂದುಗಳು ಅನಂತ, ಅದನ್ನು ನೀನೂ ಎಣಿಸಲಾರೆ ಎನ್ನುತ್ತೇನೆ. ವಸ್ತುತಃ ನಿನ್ನಲ್ಲಿ ಗುಣಗಳು ಅನಂತ. ನನ್ನಲ್ಲಿ ಅಲ್ಪ, ಅತ್ಯಲ್ಪ ಇರುವ ಗುಣಗಳೂ ಅಪೂರ್ಣ. ಅಪೂರ್ಣತೆ ಒಂದು ದೋಷವಲ್ಲವೆ ? ಆದ್ದರಿಂದ ನಾನೇನಾದರೂ ತಪ್ಪು ಮಾಡಿದರೆ ಅವನ್ನು ಕ್ಷಮಿಸಿಬಿಡು ಹಿಂದೊಮ್ಮೆ ನಾ ಮಾಡಿದ ತಪ್ಪನ್ನು ನೆನೆಸಿಕೊಂಡರೆ ದುಃಖವಾಗುತ್ತದೆ. ಕಡಲೆಮಡ್ಡಿಯನ್ನು ಪ್ರತಿ ದಿನ

ನಿನಗೆ ನಾನು ತಿನಿಸುತ್ತಿದ್ದುದನ್ನು ಕೆಲವು ಮತ್ಸರಿಗಳು ಸಹಿಸದೆ
ನೈವೇದ್ಯ ಕಾಲದಲ್ಲಿ ನಾನೆ ಅದನ್ನು ತಿನ್ನುವೆನೆಂದು ಅಪಪ್ರಚಾರ
ಮಾಡಿದರು. ಒಂದು ದಿನ ಆ ಭಕ್ಷ್ಯಕ್ಕೆ ವಿಷವನ್ನೂ ಹಾಕಿ
ದರು. ಎಂದಿನಂತೆ ನೈವೇದ್ಯಕಾಲದಲ್ಲಿ ಬಾಗಿಲು ಮುಚ್ಚಿ
ಚಿನ್ನದ ಹರಿವಾಣದಲ್ಲಿ ಆ ಭಕ್ಷ್ಯವನ್ನು ತಲೆಯ ಮೇಲೆ
ಹೊತ್ತು ನಿನಗೆ ಅರ್ಪಿಸಿದೆ. ಅಶ್ವಧಾಟಿಯಲ್ಲಿ ನಿನಗೆ ಪ್ರಿಯ
ವಾದ ದಶಾವತಾರ ಸ್ತುತಿಯನ್ನು ಹಾಡಿದೆ. ಆಗ ಎಂದಿನಂತೆ
ಹಯಗ್ರೀವ ವಿಗ್ರಹದಿಂದ ನೀನೆದ್ದು ಬಂದೆ. ಪಂಚಾಯುಧ
ಧರಿಸಿದ ಶ್ವೇತವರ್ಣದ ದಿವ್ಯಭವ್ಯ ಹಯರೂಪದಿಂದ ಬಂದು
ಬಂದೆ ನನ್ನ ಬೆನ್ನಮೇಲೆ ಮುಂಗಾಲುಗಳನ್ನಿಟ್ಟು ನಿಂತು ಎಲ್ಲ
ಭಕ್ಷ್ಯವನ್ನು ತಿಂದೆ. ಅಂದು ಮಾತ್ರ ಏಕೋ, ನನಗೊಂದಿಷ್ಟೂ
ಮಿಗಿಸಲಿಲ್ಲ. ತಿಂದು ದೂರ ಸರಿದು ಗಂಭೀರನಾಗಿ ನಿಂತೆ.
ಮೈ ಎಲ್ಲ ಹಸುರಾಗಿ ಕಾಣಿಸಿಕೊಂಡೆ. ಮುಖದಲ್ಲಿ ಎಂದಿನ
ಪ್ರಸನ್ನತೆ ಇರಲಿಲ್ಲ. ನಾನು ಕ್ಷಣಕಾಲ ಆಲೋಚಿಸಿ ಗಾಬರಿ
ಗೊಂಡೆ, 'ನನ್ನ ಸ್ವಾಮಿಗೆ ನಾನು ಕೈಯಾರೆ ವಿಷ ಉಣಿಸಿದೆನೆ?'
ಎಂದು ಅತ್ತೆ. ನೀನು ಪಯಾಪುಯು. ಮಗೂ, ಇದು ನಿನ್ನ
ತಪ್ಪಲ್ಲ, ತಪ್ಪು ಮಾಡಿದವರು ಅನುಭವಿಸುತ್ತಾರೆ ನೀನೂ
ವಿಷ ಉಣಬೇಡವೆಂದೇ ಸ್ವಲ್ಪವೂ ಉಳಿಸದೆ ಪೂರ್ತಿ ತಿಂದಿದ್ದೇನೆ.
ವಿಷ ಉಂಡರೂ ನಿನಗೇನಾಗದು. ಜೀರ್ಣಿಸಿಕೊಳ್ಳುವ ಶಕ್ತಿ
ಇದೆ. ಆದರೂ ನನ್ನ ಮನಸ್ಸು ಒಪ್ಪಲಿಲ್ಲ ಎಂದೆ, ನೀನು.
ಬಳಿಕ ನಾನು ನಿನ್ನ ಸೂಚನೆಯಂತೆ ಗುಳ್ಳದಕಾಯಿಯ ಶಾಕ
ವನ್ನು ಮಾಡಿಸಿ ನಲವತ್ತೆಂಟು ದಿನ ನಿನಗರ್ಪಿಸಿದೆ. ಆಗ ನಿನ್ನ
ಮೈಯ ಹಸುರು ಮಾಯವಾಯಿತು. ಶ್ವೇತವರ್ಣದ ಕಾಂತಿ
ಯಿಂದ ಹೊಳೆಯುತ್ತ ಪ್ರಸನ್ನನಾಗಿ ನಿಂತ ನಿನ್ನನ್ನು ನೋಡಿ

## ಪರಮಪುರುಷ

ಸ ಏವ ವಾಸುದೇವೋಽಯಂ ಸಾಕ್ಷಾತ್ ಪುರುಷ ಉಚ್ಯತೇ ।
ಸ್ತ್ರೀಪ್ರಾಯಮಿತರತ್ ಸರ್ವಂ ಜಗದ್ ಬ್ರಹ್ಮಪುರಃಸರಂ ॥

ಗಂಡು ಎಂದರೆ ನೀನೆ ಸರಿ ಉಳಿದವರೆಲ್ಲರೂ, ಬ್ರಹ್ಮದೇವನಂಥವರೂ ಕೂಡ ನಿನ್ನೆದುರಿನಲ್ಲಿ ಹೆಣ್ಣುಗಳು! ಇಂಥ ಪರಮಪುರುಷನಾದ ನಿನ್ನೆತ್ತರಕ್ಕೆ ನಾವೇರಬಲ್ಲೆವೆ? ತಪ್ಪು ಮಾಡುವುದು ನಮಗೆ ಸಹಜ ಮಹಾಪುರುಷ ನೀನು ಕ್ಷಮೆ ನೀಡಬೇಕು ಪುರುಷ ಎಂದು ಕರೆಸಿಕೊಳ್ಳಲು ಯೋಗ್ಯನು ನೀನೆ, ಇನ್ನಾರೂ ಅಲ್ಲ, ಏಕೆಂದರೆ 'ಪುರು ಸನೋತೀತಿ ಪುರುಷಃ' ಎಂಬ ವಿವರಣೆಯಂತೆ ಭಕ್ತರಿಗೆ ಯಥೇಷ್ಟ ಐಶ್ವರ್ಯವನ್ನು ನೀಡುವವನು ನೀನು 'ಪುರಾಣಿ ಷಟ್ ಸ್ಥಾನಾನಿ ಯಸ್ಯ ಸಃ ಪುರುಷಃ' ಎಂಬ ವಿವರಣೆಯನ್ನು ನೋಡಿದರೂ ಶ್ವೇತದ್ವೀಪ, ಅನಂತಾಸನ, ವೈಕುಂಠ, ಅವ್ಯಾಕೃತಾಕಾಶ, ಸತ್ಯಲೋಕ, ಎಲ್ಲ ಪ್ರಾಣಿಗಳ ಹೃದಯಕಮಲ ಎಂಬ ಆರು ಉತ್ತಮ ಸ್ಥಾನಗಳಲ್ಲಿ ಅಭಿವ್ಯಕ್ತನಾದ ದೇವ ನೀನು ನಿನ್ನ ಮುಂದೆ ನಾವೆಷ್ಟರವರು?

## ದೇಶ ದೇಶದವರ ಪೊರೆವಂತೆ ಪೊರೆ ಎನ್ನ, ಶೇಷಾಚಲ ಕೃಷ್ಣ

ಕ್ಷೀರಸಾಗರದಲ್ಲಿ ಆದಿಶೇಷನ ಮೇಲೆ ಶ್ರೀದೇವಿಯೊಂದಿಗೆ ಪವಡಿಸಿದ ಪರಮಪುರುಷ ನೀನೆ ಭಕ್ತರಿಗಾಗಿ ಉನ್ನತವಾದ ಶೇಷಾಚಲದ ತುದಿಯಲ್ಲಿ ನಿಂತು ದೇಶದ ಮೂಲೆ ಮೂಲೆಗಳಲ್ಲಿರುವ ಆ ಭಕ್ತರನ್ನು ಕೈ ಬೀಸಿ ಕರೆಯುತ್ತಿರುವ ಅವರ ದೇಶ, ವೇಷ, ಭಾಷೆಗಳಲ್ಲಿ ಎಷ್ಟು ಭಿನ್ನತೆ ಇದ್ದರೂ ಅದನ್ನು ಲಕ್ಷಿಸದೆ

ಅವರ ಅನನ್ಯ ಭಕ್ತಿಯೊಂದನ್ನು ಸ್ವೀಕರಿಸುವೆ. ಅವರವರ ಅ
ರುಚಿ ಯೋಗ್ಯತೆಗಳಿಗೆ ತಕ್ಕಂತೆ ಅವರ ಮನದಾಸೆಗಳನ್ನು
ತಣಿಸುವೆ.

'ತಂ ಯಥಾಯಥೋಪಾ ಸ ತೇ ತದೇವ ಭವತಿ ।'

ಎಂದು ವೇದ ಪುರುಷನಾದ ನೀನೆ ಘೋಷಿಸುವೆ. ಈ ಕ
ಕಾಲದಲ್ಲಿಯೂ ದೈವಭಕ್ತಿ ವಿಶ್ವಾಸಗಳನ್ನು ಜನರಲ್ಲಿ ಮೂ
ಸುತ್ತಿರುವೆ. ಸಾತ್ವಿಕ ಶ್ರದ್ಧೆಯನ್ನು ಬೆಳೆಸುತ್ತಿರುವೆ. ತಿರುಪ
ಎಂಬುದು ಭೂವೈಕುಂಠವೆಂದು ಜನ ನಂಬುವಂತೆ ಮಾ
ಸಜ್ಜರಿನಗಾನಂದ ಉಂಟುಮಾಡುತ್ತಿರುವೆ. ಹೀಗೆ ದೇಶ ದೇ
ದವರ ಪೊರೆವಂತೆ ನನ್ನನ್ನು ಪೊರೆ.

**ಶ್ರೀ ಹಯವದನ** ನಾನು ನಿನ್ನವನು. ನಿನ್ನ ಭಕ್ತ
ಭಕ್ತರನ್ನು ಪೊರೆಯುವುದು ನಿನ್ನ ಸ್ವಭಾವವೆಂದಮೇಲೆ ಪೊ
ಎಂದು ನಾನು ಬೇಡುವುದೇಕೆ ? ಇಲ್ಲ. ಹಾಗೆ ಬೇಡುವುದಿಲ್ಲ.
ನೀನೆ ಪೊರೆಯುವವನು ಎಂಬ ಅರಿವು ಸದಾ ನನಗಿರ
ಎಂದಿಷ್ಟೆ ಬೇಡುವೆ

'ಜ್ಞಾನಾನಂದ ಮಯಂ ದೇವ ನಿರ್ಮಲ ಸ್ಫಟಿಕಾಕೃತಿಂ
ಆಧಾರಂ ಸರ್ವವಿದ್ಯಾನಾಂ ಹಯಗ್ರೀವಮುಪಾಸ್ಮಹೇ ।

ಎಂಬಂತೆ ಜ್ಞಾನಪ್ರತೀಕವಾದ ನಿನ್ನಲ್ಲಿ ಜ್ಞಾನ ಒಂದನ್ನೆ ನಾನು
ಬೇಡುತ್ತೇನೆ



೪

ಸೂಳಾದಿ

ರಾಗ ; ನೀಲಾಂಬರಿ ಧ್ರುವತಾಳ

ಅರಳಿದ ಕೆಂದಾವರೆಯು ಇರವ ಧಿಕ್ಕರಿಸುವ
ಗಿರಿಯ ತಿಮ್ಮರಾಯನ ಚರಣಗಳ ಕಂಡೆನಾ
ಅರುಣ ತಲದಲಿಪ್ಪ ಅಂಕುಶ ಧ್ವಜ ವಜ್ರಾದಿ
ಸುರುಚಿರ ರೇಖೆಗಳ ಸೊಬಗ ಕಂಡೆನಾ
ಬೆರಳ ಸಾಲ್ಗಳ ಮೇಲೆ ಬೇರೆ ಬೇರೆ ತೋರುವ ಭಾ
ಸುರ ನಖ ಮಣಿಗಳೆಸೆವ ಕಿರಣಗಳ ಕಂಡೆನಾ
ಕಿರುಗೆಜ್ಜೆ ಕಡೆಯ ಪೆಂಡೆಯದ ಪ್ರಭೆಯ ಕಂಡೆನಾ
ಕರಿಯ ದಂತವ ಪೋಲ್ವ ಜಂಘೆಗಳ ಕಂಡೆನಾ
ಎರಡು ರನ್ನದ ಕನ್ನಡಿಯ ಕೆತ್ತಿಸಿದ ಒಲು
ಮುರಹರನ ಮೋಹನ ಜಾನುದ್ವಯವ ಕಂಡೆನಾ
ಉರುಟು ಕದಲಿಯ ಕಂಬದಂತೆ ಉರುತರವಾದ
ಹರಿಯ ಪೀವರ ತೊಡೆಗಳ ಕಂಡೆ ಕನಸಿನಲಿ
ವರ ಪೀತಾಂಬರ ಕಾಂಚಿ ಕಿಂಕಿಣಿ ಜಾಲಗಳಿಂದ
ಮೆರೆವವೆಂಕಟೇಶನವರ ಕಟಿಯನ್ನು ಕಂಡೆನಾ
ಕಿರುಡೊಳ್ಳಿನುದರದ ನಾಭಿಯತ್ರಿವಳಿಯ ಇಂ
ದಿರೆ ಅಪ್ಪಿಕೊಂಬ ಮಧ್ಯದ ಚೆಲುವ ಕಂಡೆನಾ
ಸಿರಿದೇವಿ ಸಿರಿವತ್ಸ ಕೊರಳ ಕೌಸ್ತುಭ ರತುನ
ಸರಗಳಿಂ ಮಿಂಚುವ ವಿಶಾಲ ಉರಸ್ಥಳವ ಕಂಡೆನಾ
ತ್ರಿರೇಖೆಗಳಿಂದೊಪ್ಪುವ ಕಂಠ ಶಂಖದಂದದ
ಕರುಣಿ ವೆಂಕಟೇಶನ ಕಂಧರವ ಕಂಡೆನಾ

ಕರದಿ ಚತುರ್ಭುಜದಿ ಕಂಕಣ ಶಂಖ ಚಕ್ರಾದಿ
ವರಾಭಯವನ್ನು ಕಂಡೆ ಕರ್ಣಕುಂಡಲವ ಕಂಡೆನಾ
ಕುರುಳು ಕೂದಲು ಫಣೆ ಸಿಂಗಾಡಿಯಂತಿರ್ಪ ಪುರುಬ
ಸರಸಿಜನಯನಗಳಿಂದವನ್ನ ಸುಕಪೋಲ
ಕೂರ್ಮನಿಂದದಗಲ್ಲ ಕುಂದಪಲ್ಲುಳು ಬಿಂಬಾ
ಧರ ಮಂದಸ್ಮಿತವದನ ಚಂಪಕ ನಾಸಿಕ
ಸ್ತುರಿ ನಾಮಗಳಿಂದನೆವ ಸಿರಿಮೊಗವ ಕಂಡೆನಾ
ಸಿರಿಯರಸ ಹಯವದನ ಶೇಷಗಿರಿಯರಸನ ಕರೀಟದ
ಪರಿಪರಿಯ ಸೊಬಗ ನಾ ಕಂಡು ಕೃತಾರ್ಥನಾದೆ ನಾ ||೯||

## ಮಧ್ಯತಾಳ

ಇಂದಿನ ದಿನ ಸುದಿನ ಗೋವಿಂದನ ಕಂಡ ಕಾರಣ
ಹಿಂದಿನ ಪಾಪವೃಂದವು ಬೆಂದು ಹೋಯಿತೆಮಗೆ
ಮುಂದಿನ ಮುಕ್ತಿ ದೊರಕಿತೊ ಎಮಗೆ
ತಂದೆ ಶ್ರೀ ಹಯವದನನೊಲಿಮೆಯಿಂದ

## ತ್ರಿಪುಟತಾಳ

ಪಾಪಕ್ಕಂಜೆನೊ ನಾ ಸಂತಾಪಕಂಜೆನೊ ನಾನು
ಪಾಪಿ ಜನರ ಬಲ್ಲು ಕೋಪಕ್ಕಂಜೆನೊ ನಾನು
ಆಪತ್ತಿಗಂಜೆನು ಯಮನ ಪಾಶಕ್ಕಂಜೆನೊ
ಶಾಪಕ್ಕಂಜೆನೊ ಅನ್ಯರ ಪಾಷ್ಟಿ ಮಾಡೆನೊ

ತಾಪಸರಿಂಗೊಲಿದ ಶ್ರೀಪತಿ ಹಯವದನನ
ಆ ಪಾದ ಪದುಮದ ನೆನಹೊಂದಿದ್ದರೆ ಸಾಕು ||೩||

## ರೂಪಕತಾಳ

ಗುರುಭಕುತಿ ಇರಬೇಕು ಹಿರಿಯರ ಕರುಣೆ ಬೇಕು
ಹರಿಕಥೆಗಳ ನಿತ್ಯ ಕೇಳುತಿರಬೇಕು
ವಿರಕುತಿ ಬೇಕು ವಿಷ್ಣುವಿನಾರಾಧನೆ ಬೇಕು
ಪರಮಂತ್ರ ಜಪಬೇಕು ತಪಬೇಕು ಪರಗತಿಗೆ
ಪಂಢರಿಯ ವ್ರತಬೇಕು ಸಿರಿಪತಿ ಹಯವದನನ
ಕರುಣಾನುಗ್ರಹಬೇಕು ವಿಷಯನಿಗ್ರಹಬೇಕು |೪|

## ಝಂಪೆ ತಾಳ

ಹರಿಸರ್ವಗುಣ ಸಾಕಾರ ಸಕಲ ಸುರರೊಡೆಯ ನಿ
ರ್ಜರರೆಲ್ಲ ಅವನ ಕಿಂಕರರೆಂದರಿಯಬೇಕು
ಮರಣ ಜನನ ದೋಷಗಳಿಗತಿ ದೂರತರನೆನಿಪ ಸ್ಮರಣೆ
ಸಂತತ ಬೇಕು ದುರಾಚಾರ ಬಿಡಬೇಕು
ಸಿರಿಹಯವದನ ಶೇಷಗಿರಿಯರಸನ
ಸ್ಮರಣೆ ಇದ್ದವನೇ ಸಂಸಾರ ಭಯ ತಾರಿಸುವ |೫||

## ಆದಿತಾಳ

ಶ್ರೀನಾಥ ಪ್ರಭುವೆತ್ತ ಹೀನಯೋನಿಗಳೊಳು
ನಾನಾ ದುಃಖಗಳುಂಬ ಹೀನಮಾನವನೆತ್ತ

ಭಾನುಮಂಡಲವೆತ್ತ ಶ್ವಾನನಬ್ಬರ ವೆತ್ತ
ಮಾನವ ಹರಿಯೆನಾನೆಂಬುದ ನೆನೆಯದಿರು
ದಾನವ ಕುಲವೈರಿ ಹಯವದನ ವೇಂಕಟ
ಶ್ರೀನಿವಾಸನ ದಾಸರ ದಾಸನೆನಿಸಿಕೊ ||೬||

### ಏಕತಾಳ

ಕೈವಲ್ಯವನೀವ ನಮ್ಮ ಶ್ರೀ ವಲ್ಲಭನ ಕೈಯಿಂದ
ನೀವೆಲ್ಲ ಕ್ಷುದ್ರವ ಬೇಡಿ ಗಾವಿಲನ ಪೋಲದಿರಿ
ಸಾವಿಲ್ಲದ ಮುಕುತಿ ಪಥವನೆಬೇಡಿ ಕೊಳ್ಳಿರೊ
ನೋವಿಲ್ಲದೆ ಸುಖಿಸಲು ಕೋವಿದರೆಲ್ಲರು
ಪೂವಿಲ್ಲನಯ್ಯ ವೆಂಕಟಪತಿ ಹಯವದನನ ಪ-
ದವಲ್ಲದನ್ಯತ್ರ ದಾವಲ್ಲಿ ಭಯತಪ್ಪದು. ||೭||

### ಆದಿತಾಳ

ದಿಲ್ಲಿರಾಯನ ಕಂಡು ಫುಲ್ಲನು ಬೇಡುವರೆ
ತಲೆಯೂರಿ ತಪಸು ಇದ್ದಲ್ಲಿ ಸಾಧಿಸಿಕೊಳ್ಳಿರೊ
ಕ್ಷುಲ್ಲಕರೆಂಜಲನುಂಡು ಬಾಳ್ವರ ನೋಡುಲಕುಮಿ
ವಲ್ಲಭನಲ್ಲದೆ ಹೀನ ಫಲದಾಸೆ ಸಲ್ಲದು.
ಚೆಲ್ವಹಯವದನ ತಿಮ್ಮನಲ್ಲದೆ ಕೈವಲ್ಯಕೆ
ಕಲ್ಲು ಹಂಚಿಗೆ ಬಾಯಿತೆರೆದಂದದಲ್ಲಲ್ಲಿಗೆ ಪೋಗದಿರಿ ||೮||

### ಅಟ್ಟತಾಳ

ಗಾತ್ರವ ಬಳಲಿಸಿ ಸ್ತೋತ್ರವ ಪಾಡುತ್ತ

ಯಾತ್ರೆಯ ಮಾಡಿ ವೆಂಕಟಪತಿ ಮೂರ್ತಿಯ
ನೇತ್ರದಿ ನೋಡಿ ಕಾಮಿತಾರ್ಥವ ಪಡೆವ ಸದ್
ಭಕ್ತರ ಕಂಡು ಸರ್ವೋತ್ತಮನ ನಂಬು
ದೈತ್ಯ ಪೌಂಡ್ರಕನ ಮತವ ಮೆಚ್ಚಿ ಕೆಡಬೇಡ
ಚಿತ್ರ ಚರಿತ್ರ ಹಯವದನನೊಲಿಸಿಕೊ ||೯||

### ರೂಪಕತಾಳ

ಹನುಮಂತನ ನೋಡು ತನುಮನಧನಂಗಳ
ಶ್ರೀನರಸಿಂಹಗರ್ಪಿಸಿದ ಪ್ರಹ್ಲಾದನ ನೋಡು
ಅನುದಿನ ಮನದಲ್ಲಿ ತಪವ ಮಾಡುವ
ಮುನಿಗಳ ಕಂಡು ನಿನ್ನ ಮನದ ಭ್ರಮೆಯ ಬಿಡು
ಚಿನುಮಯ ಮೂರುತಿ ಹಯವದನನ ಪಾದ
ವನಜಯುಗವ ನಂಬೊ ಸುಖಿಕ್ಕಿಂಬೋ ||೧೦||

### ಜತೆ

ತಿರುಮಲೆರಾಯನ ತ್ರಿವಿಕ್ರಮಮೂರುತಿ |
ಸಿರಿ ಹಯವದನನ ಚರಣವೆ ಗತಿ ಎನ್ನು ||

ಶ್ರೀವಾದಿರಾಜರು ಪೇಳಿದ ಸೂಳಾದಿಯಲ್ಲಿ ತಮಗೆ ದೊರೆತ ಭಗವಂತನ ದರ್ಶನವನ್ನು ಆನಂದದಿಂದ ಹೆಮ್ಮೆಯಿಂದ ಹಾಡಿದ್ದಾರೆ. ಭಕ್ತನು ಭಗವಂತನನ್ನು ಕಾಣಬೇಕಾದರೆ ಏನು ಮಾಡಬೇಕು, ಕಂಡಾಗ ಅವನಲ್ಲಿ ಏನು ಬೇಡಬೇಕು ಎಂದೆಲ್ಲ ವಿಸ್ತಾರವಾಗಿ ವರ್ಣಿಸಿದ್ದಾರೆ. ಅದಕ್ಕಾಗಿ ಒಂದು ರಾಗದಲ್ಲಿ

ಅನೇಕ ತಾಳಗತಿಗಳನ್ನು ತೋರಿಸಬಲ್ಲ ಸೂಳಾದಿಯ ತಂತ್ರ ವನ್ನು ಯಶಸ್ವಿಯಾಗಿ ಬಳಸಿಕೊಂಡಿದ್ದಾರೆ.

ಮೊದಲಿಗೆ ಧ್ರುವತಾಳದಲ್ಲಿ ರಾಜರು ತನಗೆ ಕನಸಿನಲ್ಲಿ ತಿರುಪತಿಯ ತಿಮ್ಮಪ್ಪನ ದರ್ಶನ ದೊರೆತುದನ್ನು ವರ್ಣಿಸಿದ್ದಾರೆ. ಅದರಿಂದ ತಾವು ಕೃತಾರ್ಥರಾದೆವೆಂದೂ ಹೇಳಿದ್ದಾರೆ ಆದರೆ ಸಾಧಕನಿಗೆ ನಿಜವಾಗಿಯೂ ಪೂರ್ಣ ಧನ್ಯತೆ ಉಂಟಾಗುವುದು ಜ್ಞಾನಚಕ್ಷುಸ್ಸಿನಿಂದ ಬಿಂಬರೂಪದಲ್ಲಿ ಭಗವಂತನ ಸಾಕ್ಷಾತ್ಕಾರ ಪಡೆದಾಗ ಮಾತ್ರ. ಮುಂದೆ ಮಠ್ಯತಾಳದಲ್ಲಿ 'ಹಿಂದಿನ ಪಾಪವೃಂದವು ಬೆಂದು ಹೋಯಿತು ಎನಗೆ ಮುಂದಿನ ಮುಕುತಿ ದೊರಕಿತು' ಎಂದು ಹೇಳುವುದಂತೂ ಬಿಂಬಾಪರೋಕ್ಷವಾದ ಬಳಿಕ ಮಾತ್ರ ಸಮಂಜಸವೆನಿಸೀತು. 'ತದಧಿಗಮೇ ಉತ್ತರ ಪೂರ್ವಾರ್ಘಯೋ ರಶ್ಲೇಷವಿನಾಶ್' 'ಪ್ರಾರಬ್ಧವನ್ನು ಹೊರತು ಬೇರೆಲ್ಲ ಹಿಂದಿನ ಪಾಪಗಳೂ ಬೆಂಕಿಗೆ ತುತ್ತಾದ ಹುಲ್ಲಿನ ರಾಶಿಯಂತೆ ಸಾಕ್ಷಾತ್ಕಾರದಿಂದ ಬೆಂದು ಹೋಗುತ್ತವೆ. ಮುಂದೆ ಪಾಪಗಳು ಸಂಭವಿಸಿದರೂ ನೀರಲ್ಲಿರುವ ಕಮಲದ ಪತ್ರದಂತೆ ನಿರ್ಲಿಪ್ತನಾಗುತ್ತಾನೆ ಸಾಧಕ. 'ಅನಿಯಮಃ ಸರ್ವೇಷಾಮ ವಿರೋಧಾತ್ ಶಬ್ದಾನುಮಾನಾಭ್ಯಾಂ' ಸಾಕ್ಷಾತ್ಕಾರವಾದರೂ 'ಕೆಲವರಿಗೆ ಮಾತ್ರ ಮುಕ್ತಿ, ಇನ್ನು ಕೆಲವರಿಗೆ ಇಲ್ಲ' ಎಂಬ ನಿಯಮವಿಲ್ಲ. ಸಾಕ್ಷಾತ್ಕಾರವಾದವನಿಗೆ ಮುಕ್ತಿ ದೊರೆಯುವುದು ನಿಶ್ಚಿತ' ಎಂದು ಬ್ರಹ್ಮ ಸೂತ್ರದಲ್ಲಿ ಸಿದ್ಧಾಂತ ಮಾಡಲಾಗಿದೆ. ಕನಸಿನಲ್ಲಿ ಭಗವಂತನ ಸಾಕ್ಷಾತ್ಕಾರವಾದ ಮಾತ್ರಕ್ಕೆ ಇದು ಸಂಭವನೀಯವಲ್ಲ. ಅದರಿಂದ ಇಲ್ಲಿ ಹೇಳಿದ ಕನಸು ಬರಿಯ ಕನಸಲ್ಲ.

'ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮಿ

ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋಮುನೇಃ'

'ಸಾಮಾನ್ಯರಿಗೆ ಯಾವುದು ರಾತ್ರಿಯೋ ಅದು ಯೋಗಿಗೆ ಹಗಲು. ಅವರ ಹಗಲೆ ಇವನಿಗೆ ರಾತ್ರಿ. ಎಂದು ಹೇಳುತ್ತಿದೆ ಭಗವದ್ಗೀತೆ ಸಾಮಾನ್ಯರು ಬಯಸುವುದು ವಿಷಯ ಭೋಗ ವನ್ನು. ಯೋಗಿ ಬಯಸುವುದು ಭಗವಂತನ ದರ್ಶನವನ್ನು. ನಾವು ಯಾವುದಕ್ಕಾಗಿ ಹಂಬಲಿಸುವೆವೊ ಅದೊಂದೆ ನಮಗೆ ಕಾಣುವುದು ಸಹಜ. ಮಹಾಭಾರತದಿಂದ ಒಂದು ಉದಾಹರಣೆ: ಆಚಾರ್ಯ ದ್ರೋಣರು ಶಿಷ್ಯರ ಧನುರ್ವಿದ್ಯಾಭ್ಯಾಸವನ್ನು ಪರೀಕ್ಷಿಸಲು ಒಂದು ಮರದ ಮೇಲಿನ ಹಕ್ಕಿಯನ್ನು ತೋರಿಸಿ ಅದರ ತಲೆಗೆ ಬಾಣವನ್ನು ಗುರಿ ಇಡಲು ಹೇಳಿದರು. ಈ ಪರೀಕ್ಷೆಯಲ್ಲಿ ಗೆದ್ದವನು ಅರ್ಜುನ. ಅವನಿಗೆ ಮರವಾಗಲಿ ಅದರ ಮೇಲೆ ಕುಳಿತಿದ್ದ ಹಕ್ಕಿಯಾಗಲಿ ಕಾಣಿಸಲಿಲ್ಲವಂತೆ. ಅವನಿಗೆ ಕಾಣಿಸಿದುದು. ಹಕ್ಕಿಯ ತಲೆ ಮಾತ್ರ. ಇದನ್ನು ಕೇಳಿದಾಗ ದ್ರೋಣರಿಗೆ ರೋಮಾಂಚ ಉಂಟಾಯಿತು.

ಶಿರಃಪಶ್ಯಾಮಿ ಭಾಸಸ್ಯ ನ ಗಾತ್ರಮಿತಿ ಸೋಽಬ್ರವೀತ್ ।
ಅರ್ಜುನೇನೈವ ಮುಕ್ತಸ್ತು ದ್ರೋಣೋಹೃಷ್ಟ ತನೂರುಹಃ॥

ಬೇರೆ ಎಲ್ಲ ರಾಜಕುಮಾರರಿಗೂ ಮರ, ಹಕ್ಕಿ, ಅದರ ತಲೆ—ಎಲ್ಲವೂ ಕಾಣಿಸುತ್ತಿದ್ದುವು. ಅವರಾರೂ ಗುರಿ ಇಡ ಲಾರರೆಂಬುದು ದ್ರೋಣರತೀರ್ಪು. ಹೀಗೆ ಯೋಗಿಯು ಅಂತ ರ್ಮುಖಿಯಾಗಿರುವುದರಿಂದ ಬಾಹ್ಯ ಪ್ರಪಂಚ ಅವನಿಗೆ ಕಾಣಿ

ಸುವುದಿಲ್ಲ. ಅದನ್ನು ತೋರಿಸುವ ನಮ್ಮ ಹಗಲು ಅವನಿಗೆ ರಾತ್ರಿ. ಇಂಥ ರಾತ್ರಿಯಲ್ಲಿ ರಾಜರ ಒಳಗಣ್ಣಿಗೆ ಭಗವಂತನ ದರ್ಶನವಾಗಿದೆ. ಅದನ್ನು ಕನಸೆಂದು ಕರೆದರೆ ತಪ್ಪಿಲ್ಲ.

ಭಗವಂತನ ಸಾಕ್ಷಾತ್ಕಾರ ಭಕ್ತನಿಗೆ ಒಂದು ಕ್ಷಣ ಮಾತ್ರವಿರುತ್ತದೆ. ಬಳಿಕ ಬೇಕೆಂದರೂ ಭಗವಂತನ ಆ ರೂಪ ಕಾಣಿಸಲಾರದು. ಈ ದೃಷ್ಟಿಯಿಂದ ನೋಡಿದರೂ ಸಾಕ್ಷಾತ್ಕಾರ ಒಂದು ಕನಸು. ಬಾಹ್ಯಪ್ರಪಂಚವು ನಾವು ನೋಡುವಷ್ಟು ಕಾಲ ಕಾಣಿಸಿಕೊಳ್ಳುತ್ತದೆ. ಇನ್ನೂ ಸ್ವಲ್ಪ ಕಾಣುವೆವೆಂದರೆ ಅದು ಒಲ್ಲೆನೆನ್ನುವುದಿಲ್ಲ. ಕನಸು ಹಾಗಲ್ಲ. ಕ್ಷಣಕಾಲ ಮಾತ್ರ ಕಾಣಿಸಿಕೊಂಡು ಮರೆಯಾಗುತ್ತದೆ. ಸಾಕ್ಷಾತ್ಕಾರವೂ ಈ ಕನಸಿನಂತೆಯೇ ಇರುತ್ತದೆ. ಮಿಂಚಿನಂತೆ ಕ್ಷಣಕಾಲ ಹೊಳೆದು ಮಾಯವಾಗುವ ಆ ಸಾಕ್ಷಾತ್ಕಾರದ ಮಧುರ ಸ್ಮೃತಿಯು ಯೋಗಿಯ ಹೃದಯದಲ್ಲಿ ಮುಂದೆ ಬಾಳಿನುದ್ದಕ್ಕೂ ಅರಳಿ ಸುಗಂಧ ಬೀರಿ ಅವನಲ್ಲಿ ಸದಾ ಆನಂದ ತನ್ಮಯತೆ ಉಂಟುಮಾಡು ತ್ತದೆ. ರೋಮಾಂಚ ತಮತ್ತದೆ. ಆಗ ಅವನು 'ಬಿಗಿದ ಕಂಠದಿಂ ದೃಗ್ ಬಾಷ್ಪಗಳಿಂ ನಗೆ ಮೊಗದಿಂ ರೋಮಗಳುಗಿದು ಮಿಗೆ ಸಂತೋಷದಿ ನಾಲ್ಮೊಗನಯ್ಯನ ಗುಣ ಪೊಗಳಿ' ಹಿಗ್ಗುತ್ತಾನೆ. ಬಾಳಿನ ಫಲವನ್ನು ಪಡೆದು ಕೃತಾರ್ಥನಾಗುತ್ತಾನೆ.

ಹೀಗೆ ಸಾಕ್ಷಾತ್ಕಾರವನ್ನು ಪಡೆದ ಯೋಗಿ ಲೋಕಕ್ಕೆ ನಿಜವಾದ ಗುರುವಾಗಿದ್ದು ಅವನು ಸದಾ ಮೌನದಿಂದಿರುತ್ತಾನೆ. ಕೆಲವೊಮ್ಮೆ ಮಾತನಾಡುತ್ತಾನೆ, ಹಾಡುತ್ತಾನೆ, ಕುಣಿಯ್ಯು ತ್ತಾನೆ. ಅವನ ಮಾತು ಕಡಿಮೆ. ಆದರೆ ಅರ್ಥಪೂರ್ಣ, ಸ್ವಾನು

ಭವದಿಂದ ತುಂಬಿದ್ದು ಪ್ರಾಯೋಗಿಕವಾಗಿ ಸತ್ಯವೆನಿಸುತ್ತದೆ. ದೇವಾಂಶ ಸಂಭೂತರಾದ ಮಹಾತ್ಮರ ಮಾತೆಂದರೆ ಹೀಗೆ ಇರುತ್ತದೆ.

"ದೇವಾ ಮನುಷ್ಯತಾಂ ಪ್ರಾಪ್ತಾ ವಿಜ್ಞೇಯಾ ದೇವ ಮಾನುಷಾಃ
ಧ್ಯಾನಂ ಕುರ್ವಂತ ಇವ ತೇ ಸ್ವೈವ ಸ್ವೈರ್ಬಹು ಭಾಷಿಣಃ
ಬ್ರೂಯುರರ್ಥವತೀಂವಾಚಂ ನಾನಾರ್ಥಾಂ ಪ್ರಾಯಶೋಹಿತೇ"
ಎಂದು ಪದ್ಮಪುರಾಣ ಹೇಳುತ್ತದೆ

ರಾಜರು ಹೇಳುವಂತೆ ಶೇಷಗಿರಿಯರಸ ತಿಮ್ಮರಾಯನೆ ಅವರ ಕನಸಿನ ರಾಜ. ಲೋಕದಲ್ಲಿರಬಹುದಾದ ಎಲ್ಲ ಚೆಲುವಿನ ಮೊತ್ತವಾಗಿರುವ ಮಹಾರಾಯ. ಅಂದು ದೇವತೆಗಳೆಲ್ಲರನ್ನೂ ಕಡೆಗಣಿಸಿ ಈ ಪುರುಷೋತ್ತಮನನ್ನೆ ಸಿರಿದೇವಿ ವರಿಸಿದ್ದಳು. ಆದ್ದರಿಂದ ಸಿರಿಯರಸ ಹಯವದನನೆಂದರೆ ಈತನೆ. ತ್ರಿವಿಕ್ರಮರಾಯನೆಂದರೂ ಈತನೆ. ಇವನ ಶರೀರದ ಒಡೊಂದು ಅಂಗೋಪಾಂಗವೂ ಲೋಕದ ಎಲ್ಲ ಸೊಬಗನ್ನು ಸೂರೆಗೊಳ್ಳುತ್ತದೆ. ಇವನನ್ನು ಕಣ್ತುಂಬ ಕಾಣುವವನೆ ಧನ್ಯ.

'ಏತದ್ ಬುದ್ಧ್ವಾ ಬುದ್ಧಿ ಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ' ಶ್ರೀನಿವಾಸನ ನಿಜ ಸ್ವರೂಪ ನಿರಾಕಾರವೆಂದೂ ಸಾಕಾರಮೂರ್ತಿ ಉಪಾಸನೆಗಾಗಿ ಮಾತ್ರ ಉಪಯುಕ್ತವಾಗಿದ್ದು ಸಾಧಕನೆ ಅದನ್ನು ಕಲ್ಪಿಸಿ ಕೊಂಡಿರುತ್ತಾನೆ ಎಂದೂ ಹೇಳುವವರು ಭಗವಂತನ ದಿವ್ಯಮಂಗಳ ವಿಗ್ರಹದ ಸೌಂದರ್ಯಾನುಭವದಿಂದ ವಂಚಿತರಾಗುತ್ತಾರೆ.

ಭಗವಂತನ ಪಾದಗಳು ಅರಳಿದ ಕೆಂದಾವರೆಯ ಸೊಬ

ಗನ್ನು ಧಿಕ್ಕರಿಸುತ್ತವೆ. ವೈಕುಂಠದಿಂದ ಶೇಷಗಿರಿಯ ತುದಿಯ ವರೆಗೆ ನಡೆದು ಬಂದರೂ ಆ ಪಾದಗಳು ಆಯಾಸಗೊಂಡಿಲ್ಲ, ಕಂದಿಲ್ಲ. ಕೆಂದಾವರೆಯ ಕೋಮಲತೆ, ಪ್ರಸನ್ನತೆ ಇನ್ನೂ ಹೆಚ್ಚಾಗಿಯೇ ಅಲ್ಲಿ ಕಂಡುಬರುತ್ತಿದೆ. ಕೆಂದಾವರೆ ಏನೆಂದರೂ ಒಂದು ಜಡವಸ್ತು. ಪರಮ ಚೇತನವಾದ ತಿಮ್ಮರಾಯನ ಚರಣಕ್ಕೆ ಕೆಂದಾವರೆಯ ಹೋಲಿಕೆ ನೀಡಿದರೆ, ಕೆಂದಾವರೆಗೆ ಕಾಗದದ ಹೂವಿನ ಹೋಲಿಕೆ ನೀಡಿದಂತಾಗುತ್ತದೆ. ಆದರೂ ರಾಜರಿಗೆ ತಮಗೆ ಲಭಿಸಿದ ಅನಿರ್ವಚನೀಯ ಚರಣ ಸೌಂದರ್ಯ ಸಾಕ್ಷಾತ್ಕಾರಾನುಭವವನ್ನು ಶಬ್ದದಿಂದ ಹೇಳ ಬೇಕಾಗಿದೆ ತಾನೆ !

ತಿಮ್ಮರಾಯನ ಅಂಗಾಲಿನಲ್ಲಿ ಅಂಕುಶ ಧ್ವಜ ವಜ್ರ ಕಮಲಗಳ ಸುಂದರ ರೇಖೆಗಳಿವೆ. ಬೆರಳ ಸಾಲುಗಳ ಮೇಲ್ಭಾಗದಲ್ಲಿ ಉಜ್ಜ್ವಲ ರತ್ನಗಳಂತೆ ಹೊಳೆಯುವ ಉಗುರುಗಳ ಕಾಂತಿ ಹೊರ ಚೆಲ್ಲುತ್ತಿದೆ. ಕಿರುಗೆಜ್ಜೆ ಕಡಗ ಅಂದುಗೆಗಳು ತಮ್ಮ 'ಪ್ರ—ಭೆ' ಯನ್ನು ಅಂದರೆ ಉತ್ತಮ ಕಾಂತಿಯನ್ನು ತೋರುತ್ತಿವೆ.

'ಸ ಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠದ್ದಶಾಂಗುಲಂ' ಎಂಬಂತೆ ಗುಣತ್ರಯಕ್ಕಿಂತಲೂ ಆಚೆ ಅವ್ಯಾಕೃತಾಕಾಶದಲ್ಲಿ ವ್ಯಾಪಿಸಿದ ಹರಿಯ ಮಹಾಕಾಯಕ್ಕೆ ಜಡ ಆಭರಣಗಳಿರಲು ಶಕ್ಯ ವಿಲ್ಲದುದರಿಂದ ಕಾಂತಿ ಸೌಂದರ್ಯಗಳ ಅಧಿದೇವತೆ ಚಿದಾ ನಂದ ಸ್ವರೂಪಿಣಿ ರಮೆಯೆ ಆಭರಣಗಳ ರೂಪದಿಂದ ಹರಿಯ ಅಂಗಾಂಗಗಳನ್ನು ಅಲಂಕರಿಸುತ್ತಾಳೆ. ಜಡ ಆಭರಣಗಳ ಕಾಂತಿಯೆ ಸುಂದರವಾಗಿರುವಾಗ ಚಿನ್ಮಯ ಆಭರಣಗಳ ಕಾಂತಿ

ಎಷ್ಟಿರಬಹುದು ಎಂದು ನಮಗೆ ಊಹಿಸಲು ಬಿಟ್ಟಿದ್ದಾರೆ, ರಾಜರು. ಪ್ರ (=ಉತ್ತಮವಾದ, ಚಿನ್ಮಯವಾದ) + ಭಾ (=ಕಾಂತಿ)=ಪ್ರಭೆ. ನಾವೇನೋ ಎಲ್ಲ ಕಾಂತಿಗೂ 'ಪ್ರಭೆ' ಎನ್ನುತ್ತೇವೆ. ಆದರೆ ಲೋಕೋತ್ತರ ಕವಿಗಳ ಶಬ್ದ ಪ್ರಯೋಗ ದಲ್ಲಿ ಉತ್ತಮ ಔಚಿತ್ಯ ದೃಷ್ಟಿಯೊಂದಿದೆ ತಾನೆ !

ತಿಮ್ಮರಾಯನ ಜಂಘೆಗಳು ಆನೆಯ ದಂತವನ್ನು ಹೋಲು ತ್ತಿವೆ. ಮುರಹರನ ಮೋಹಕವಾದ ಮಂಡಿಗಳನ್ನು ಕಂಡರೆ ಎರಡು ರತ್ನದ ಕನ್ನಡಿಗಳನ್ನು ಕೀಲಿಸಿ ಇಟ್ಟಂತೆ ಕಾಣುತ್ತದೆ. ಹರಿಯ ದುಂಡಗಿನ ಪುಷ್ಟವಾದ ತೊಡೆಗಳು ಬಾಳೆಕಂಬಗಳಂ- ತಿವೆ. ವೆಂಕಟೇಶನ ಕಟಿಯೂ ಉತ್ತಮವಾದ ಪೀತಾಂಬರ ಒಡ್ಯಾಣ ಕಿರುಗೆಜ್ಜೆಗಳಿಂದ ಮೆರೆಯುತ್ತಿದೆ. ಇಲ್ಲಿ ಮುರಹರ' ಹರಿ, ವೆಂಕಟೇಶ ಶಬ್ದಗಳನ್ನು ಪ್ರಯೋಗಿಸಿದುದನ್ನು ಕಂಡರೆ ಪದದ ಸಾಲುಗಳ ಭರ್ತಿಗಾಗಿ ಪ್ರಾಸಕ್ಕನುಗುಣವಾಗಿ ಶಬ್ದ ಗಳನ್ನಿಟ್ಟಿದ್ದಾರೆ, ರಾಜರು ಎಂದು ಅನ್ನಿಸಬಹುದು. ವಸ್ತುತಃ ಈ ಶಬ್ದಗಳಲ್ಲಿಯೂ ಔಚಿತ್ಯ ದೃಷ್ಟಿಗೆ ಕುಂದಿಲ್ಲ. ಈ ತಿಮ್ಮ ರಾಯನೆ ಹಿಂದೆ ಕೃಷ್ಣನಾಗಿ ನರಕಾಸುರನ ಬಂಟನಾದ ಮುರ ನೆಂಬ ಐದುತಲೆಯ ಘೋರ ರಾಕ್ಷಸನನ್ನು ಕೊಂದು ಮುರ ಹರನಾದ, ಬಳಿಕ ನರಕನನ್ನು ಕೊಂದು ಅವನ ಬಂಧನದಲ್ಲಿದ್ದ ಹದಿನಾರುಸಾವಿರದ ನೂರು ಮಂದಿ ರಾಜಕನ್ನೆಯರನ್ನು ಬಿಡು ಗಡೆ ಮಾಡಿ ಅವರ ದೀನ ಪ್ರಾರ್ಥನೆಯಂತೆ ತಾನೆ ಅವರನ್ನು ಮದುವೆಯಾದ. ತನ್ನ ದುಂಡಗಿನ ಪುಷ್ಟವಾದ ತೊಡೆಯ ಮೇಲೆ ಅವರಿಗೆ ಸ್ಥಾನವನ್ನಿತ್ತು ಅವರ ದುಃಖವನ್ನು ಪರಿಹರಿಸಿದ ಆನಂದದ ಹೊಳೆ ಹರಿಸಿದ. ಹೀಗೆ ಆ ಮುಗ್ಧೆಯರನ್ನು ತನ್ನ

ಅಂತಃಪುರಕ್ಕೆ ತಂದು ಅವರ ದುಃಖ ಪರಿಹರಿಸಿದುದರಿಂದ ಮುರ ಹರನೆ ಹರಿಯಾದ. ಹರಿ ಎಂದರೆ ತರುವವ ಅಥವಾ ಪರಿಹರಿ ಸುವವ ಎಂದು ಅರ್ಥವಿದೆ. ಅವತಾರ ಕಾರ್ಯವನ್ನೆಲ್ಲ ಮುಗಿಸಿ ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಿ ವೈಕುಂಠದಲ್ಲಿ ಶೇಷನ ಮೇಲೆ ಪವಡಿಸಿದರೂ ತಿರುಗಿ ಪದ್ಮಾವತಿಯ ಸಂತೋಷಕ್ಕಾಗಿ ವೈಕುಂಠದಿಂದ ವೇಂಕಟಾಚಲದವರೆಗೆ ನಡೆದು ಬಂದು ವೆಂಕ ಟೇಶನೆನಿಸಿದ. ಭಾರತ ದೇಶದಲ್ಲಿಯೆ ಅತ್ಯಂತ ಶ್ರೀಮಂತನಾದ ದೇವನೆನಿಸಿದ ಈ ವೆಂಕಟೇಶನ ಕಟಿಯಲ್ಲಿ ಉತ್ತಮ ಪೀತಾಂಬರ ಒಡ್ಯಾಣ ಕಿರುಗೆಜ್ಜೆಗಳು ಮೆರೆಯುತ್ತಿರುವುದು ಸಹಜ.

ತಿಮ್ಮರಾಯನ ಅಡಿಹೊಟ್ಟೆ, ಹೊಟ್ಟೆ, ನಾಭಿ ಹೊಟ್ಟೆಯ ಮೂರು ರೇಖೆಗಳು, ಇಂದಿರೆ ಅಪ್ಪಿಕೊಂಬುವ ಚೆಲುವಾದ ನಡು ಲಕ್ಷ್ಮಿಯ ವಾಸಸ್ಥಾನವಾದ ಶ್ರೀವತ್ಸದಿಂದಲೂ ಕೊರಳ ಕೌಸ್ತುಭ ಹಾರದಿಂದಲೂ ಶೋಭಿಸುವ ವಿಶಾಲವಾದ ಎದೆ ಮೂರು ರೇಖೆಗಳಿಂದ ಶೋಭಿಸುವ ಕಂಠ, ಶಂಖದಂತೆ ಇರುವ ಮೋಹಕವಾದ ಕುತ್ತಿಗೆ, ಕಂಕಣದಿಂದ ಶೋಭಿಸುವ ನಾಲ್ಕು ಕೈಗಳಲ್ಲಿ ಶಂಖಚಕ್ರ ವರ ಅಭಯಮುದ್ರೆಗಳು, ಹೊಳೆಯುವ ಕರ್ಣಕುಂಡಲ, ಕುರುಳು ಕುಣಿಯುವ ವಿಶಾಲವಾದ ಹಣೆ, ಬಿಲ್ಲಿನಂತೆ ಬಾಗಿದ ಹುಬ್ಬು, ಕಮಲದಂಥ ಕಣ್ಣು, ಸುಂದರ ವಾದ ಕೆನ್ನೆ, ಆಮೆಯಂಥ ಗಲ್ಲ, ಮೊಲ್ಲೆ ಹೂವಿನಂಥ ಹಲ್ಲು, ತೊಂಡೆಯಂಥ ತುಟಿ, ಮಂದಹಾಸ, ಸಂಪಿಗೆಯಂಥ ಮೂಗು, ಹಣೆಯ ಕಸ್ತೂರಿನಾಮ ಇವುಗಳಿಂದ ಶೋಭಿಸುವ ಅಂದವಾದ ಮುಖ, ಶೇಷಗಿರಿಯರಸನ ಸುಂದರವಾದ ಕಿರೀಟ ಇವನ್ನೆಲ್ಲ ಕಂಡು ಕೃತಾರ್ಥನಾದೆನೆಂದಿದ್ದಾರೆ ರಾಜರು.

ಎರಡನೆಯದಾದ ಮಠ್ಯತಾಳದಲ್ಲಿ ರಾಜರು ಗೋವಿಂದನ ಸಾಕ್ಷಾತ್ಕಾರದಿಂದ ತಾನು ಹೇಗೆ ಕೃತಾರ್ಥನಾದೆನೆಂಬುದನ್ನು ವರ್ಣಿಸಿದ್ದಾರೆ. ಇಂದು ಗೋವಿಂದನ ದರ್ಶನ ಲಭಿಸಿದುದರಿಂದ ಈದಿನ ಸುದಿನ ಎನ್ನುತ್ತಾರೆ. ಇಲ್ಲಿ ಗೋವಿಂದ ಎಂಬ ಹೆಸರು ಅರ್ಥಪೂರ್ಣ. 'ವೇದೈಕ ಸಮಧಿಗಮ್ಯ' ಎಂದು ಅದರ ಅರ್ಥ. ವೇದದಿಂದ ಮಾತ್ರ ತಿಳಿಯಬಲ್ಲ ದೇವನನ್ನು ಅವನ ದಯೆಯಿಂದ ಕಣ್ಣಾರೆ ಕಂಡಿದ್ದೇನೆ. ಇದೇನೂ ಸಾಮಾನ್ಯವಾದ ಸಾಧನೆಯಲ್ಲ ಇದರಿಂದ ಹಿಂದಿನ ಪಾಪವೆಲ್ಲ ಬೆಂದು ಹೋಯಿತು. ಮುಂದೆ ಮುಕ್ತಿ ದೊರೆಯುವುದು ನಿಶ್ಚಿತ. ಆದರೆ ಅದಕ್ಕೂ ತಂದೆ ಹಯವದನನ ಅನುಗ್ರಹ ಬೇಕು.

ಅಜ್ಞಾನಾಂ ಜ್ಞಾನದೋ ವಿಷ್ಣುರ್ಜ್ಞಾನಿನಾಂ ಮೋಕ್ಷದಶ್ಚ ಸಃ' ಸಾಧಕನಿಗೆ ಸಾಕ್ಷಾತ್ಕಾರ ಅವನ ಅನುಗ್ರಹದಿಂದಲೆ ಸಿಗಬೇಕು. ಸಾಕ್ಷಾತ್ಕಾರ ಪಡೆದ ಜ್ಞಾನಿಗೆ ಮೋಕ್ಷವೂ ಅವನ ಅನುಗ್ರಹದಿಂದಲೆ ದೊರೆಯಬೇಕು. ಹಯವದನನು ಒಲಿದರೆ ನಮಗೆ ಗೋವಿಂದನೆನಿಸುತ್ತಾನೆ, ವೇದಗಳಿಂದ ತನ್ನ ಸ್ವರೂಪವನ್ನು ಪ್ರಕಟಗೊಳಿಸುತ್ತಾನೆ. ಮುಂದೆ ಸಾಕ್ಷಾತ್ಕಾರದ ಮೂಲಕ ಮೋಕ್ಷವನ್ನಿತ್ತು ಮುಕುಂದನೆನಿಸುತ್ತಾನೆ. ಮೋಕ್ಷಸಾಧನೆಯಲ್ಲಿ ಅವನ ಅನುಗ್ರಹ ನಿರಂತರ ಬೇಕು.

ಮೂರನೆಯದಾದ ತ್ರಿಪುಟ ತಾಳದಲ್ಲಿ ರಾಜರು ವರ್ಣಿಸುತ್ತಾರೆ— 'ಪರಮಾತ್ಮ ಸಾಕ್ಷಾತ್ಕಾರ ಪಡೆದವನು ಯಾವುದಕ್ಕೂ ಅಂಜುವುದಿಲ್ಲ. ಪರಮಾತ್ಮನ ಸ್ಮರಣೆಯಿಂದ ಸಿಗುವ ಆನಂದಕ್ಕೆ ಚ್ಯುತಿ ಉಂಟಾಗುವುದಿದ್ದರೆ ಅದಕ್ಕೆ ಮಾತ್ರ ಅಂಜು

ತ್ತಾನೆ. ಸಂಕಟ ಬಂದಾಗ ವೆಂಕಟರಮಣನ ಸ್ಮರಣೆ ಬರುವುದಾದರೆ ಸಂಕಟವೆ ಇರಲಿ ಎನ್ನುತ್ತಾನೆ ಆತ.

"ವಿಪದಃ ಸಂತು ನಃ ಶಶ್ವತ್ ಯಾ ಸು ಸಂಕೀರ್ತ್ಯತೇ ಹರಿಃ" ಎಂದು ಪ್ರಾರ್ಥಿಸುತ್ತಾನೆ.

ಹಯವದನನ ದಯೆಗೆ ಪಾತ್ರನಾದವನು ಯಾವ ಪಾಪಕ್ಕೂ ಅಂಜಬೇಕಾಗಿಲ್ಲ. ರಾಗ ದ್ವೇಷಗಳಿಲ್ಲದ ಕಾರಣ ಆ ಪಾಪ ಅಂಟಿಕೊಳ್ಳುವುದಿಲ್ಲ. ಶ್ರೀಹರಿ ಅಂಥ ಪಾಪವನ್ನು ಗಂಭೀರವಾಗಿ ಪರಿಗಣಿಸುವುದೂ ಇಲ್ಲ. ಜಯ ವಿಜಯರು ದೈತ್ಯರ ಆವೇಶದಿಂದ ಶ್ರೀಹರಿಯಲ್ಲಿ ಎಷ್ಟು ಅಪರಾಧ ಮಾಡಿದರೂ ಅದನ್ನು ಕ್ಷಮಿಸಿದ್ದಾನೆ, ಶ್ರೀಹರಿ. ಪಾಪ ಮಾಡಿದ ಭಕ್ತನು ಪಶ್ಚಾತ್ತಾಪದಿಂದ ಬೆಂದು ಭಗವಂತನಿಗೆ ಇನ್ನೂ ಹತ್ತಿರ ಬರುತ್ತಾನೆ. ಅವನು ದೂರಾಗುವ ಅಂಜಿಕೆ ಇಲ್ಲ. ದುಃಖ ಸಂತಾಪಗಳಿಗೂ ಅವನು ಅಂಜಬೇಕಾಗಿಲ್ಲ. ಪ್ರಾರಬ್ಧ ಕರ್ಮದಿಂದ ಬರುವ ಆ ದುಃಖ ಸಂತಾಪಗಳನ್ನು ಅನುಭವಿಸಿದರೆ ಕರ್ಮ ಸವೆಯುತ್ತದೆ. ಮುಕ್ತಿ ಸಮೀಪಿಸುತ್ತದೆ. ವ್ಯಾಯಾಮದ ಆಯಾಸ ದೇಹದಾರ್ಢ್ಯಕ್ಕೆ ಕಾರಣವಾಗುವಂತೆ ಪ್ರಾರಬ್ಧ ದುಃಖಾನುಭವವು ಮುಕ್ತಿಗೆ ಕಾರಣವಾಗುತ್ತದೆ. ಅದಕ್ಕೆ ಅಂಜುವ ಕಾರಣವಿಲ್ಲ. ವಿಷ್ಣು ಭಕ್ತನೋರ್ವನು ನೆಮ್ಮದಿಯಿಂದ, ಸಂತೋಷದಿಂದ ತಾನೂ ಬಾಳಿ ಇತರರನ್ನೂ ಹಾಗೆ ಬಾಳಲು ಕಲಿಸುವುದನ್ನು ನೋಡಿ ಪಾಪಿ ಜನರು ಕರುಬಿ ಕೋಪಿಸಿಕೊಳ್ಳಬಹುದು.

'ಮೃಗಮೀನಸಜ್ಜನಾನಾಂತೃಣ ಜಲ
ಸಂತೋಷ ವಿಹಿತ ವೃತ್ತೀನಾಂ ।

ಲುಬ್ಧಕ ಧೀವರ ಪಿಶುನಾ ನಿಷ್ಕಾರಣ ವೈರಿಣೋಜಗತಿ ||
'ಹುಲ್ಲು ತಿಂದು ಬದುಕುವುದು ಜಿಂಕೆ. ನೀರಿನಿಂದಲಿ ಬದುಕುತ್ತದೆ, ಮೀನು. ತಾನಾಗಿ ದೊರೆತ ವಸ್ತುಗಳಲ್ಲಿಯೆ ತೃಪ್ತಿಪಟ್ಟು ಬದುಕುವವರು ಸಾಧುಸಂತರು. ಆದರೂ ಜಿಂಕೆಗೆ ವೈರಿ ಬೇಡನಿದ್ದಾನೆ. ಮೀನಿಗೆ ಬೆಸ್ತ. ಹಾಗೇ ಸಾಧುಸಂತರಿಗೆ ದುರ್ಜನರು. ಇಲ್ಲಿ ವೈರಕ್ಕೆ ಕಾರಣವಿಲ್ಲ. ನಿಷ್ಕಾರಣ ವೈರಿಗಳಿವರು.' ಎಂದು ಭರ್ತೃಹರಿ ಹೇಳಿದ್ದಾನೆ. ಇಂಥ ವೈರ ಕೋಪ ತಾಪಗಳಿಗೆ ಅಂಜಬೇಕಾಗಿಲ್ಲ. ಆ ಪಾಪಿ ಜನರೇನು ಮಾಡಬಲ್ಲರು ? ಆಪತ್ತು ತಂದೊಡ್ಡಬಹುದು, ಪ್ರಾಣಾಪಾಯ ಉಂಟುಮಾಡಬಹುದು. ಭಕ್ತನು ಗೋವಿಂದನ ದಯೆಯಿಂದ ಯಮಪಾಶಕ್ಕೇ ಅಂಜಲಾರ. ಇವಕ್ಕೆಲ್ಲ ಅಂಜುವನೆ ? ಶ್ರೀಪತಿಯ ಪಾದಪದುಮದ ನೆನಹೆಂಬ ವಜ್ರಕವಚವಿದೆ ಅವನಿಗೆ. ಶಿಶು ಪ್ರಹ್ಲಾದನು ತನ್ನ ಹೆತ್ತ ತಂದೆಯೆ ಅಂಥ ಪೀಡೆಗಳನ್ನು ಕೊಟ್ಟಾಗ ಎಲ್ಲವನ್ನೂ ಸಹಿಸಿ ಕೊಳ್ಳಲಿಲ್ಲವೆ! ಸಹನೆಯಿಂದ ಇರುವ ಸಜ್ಜನರನ್ನು ಅನ್ಯರು ದುರ್ಜನರು ಬೇರೆನೂ ಉಪಾಯ ಕಾಣದೆ ಶಪಿಸಬಹುದು, ನಿಂದಿಸಬಹುದು. ಅಪಪ್ರಚಾರ ನಡೆಸಬಹುದು. ಇದರಿಂದ ಅವರಿಗೇ ಕೇಡು.

'ತಸ್ಯ ಪುತ್ರಾ ದಾಯ ಮುಪಯಂತಿ ।
ಸುಹೃದಃ ಸಾಧು ಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ ।'

ಮಕ್ಕಳು ತಂದೆಯ ಆಸ್ತಿಯನ್ನು ಪಡೆಯುತ್ತಾರೆ ಹಾಗೆಯೇ ಮಿತ್ರರು ಅವನ ಸತ್ಕರ್ಮದಲ್ಲಿ ಪಾಲುಗೊಳ್ಳುತ್ತಾರೆ. ಶತ್ರುಗಳು ಅವನ ದುಷ್ಕರ್ಮವನ್ನು ಹೊರುತ್ತಾರೆ.

ವಿಷ್ಣುಲೋಕಕ್ಕೆ ಹೊರಟು ನಿಂತ ಸಾಧು ಸಂತರಿಗೆ ಸ್ವರ್ಗ ಸುಖವೂ ಬೇಡ. ಯಾ ಐಹಿಕ ಸಂಪತ್ತೂ ಬೇಡ. ಅವೆಲ್ಲ ವನ್ನೂ ತಮ್ಮನ್ನು ಪ್ರೀತಿಸುವ ಸಜ್ಜನರಿಗೆ ಹಂಚುತ್ತಾರೆ. ದುರ್ಜನರು ಅವರನ್ನು ದ್ವೇಷಿಸಿ ಅವರ ದುಷ್ಕರ್ಮಗಳನ್ನು ಹೊರುತ್ತಾರೆ. ಅದ್ದರಿಂದ,

'ಆಕ್ರೋಶಕ ಸಮೋ ಲೋಕೇ ಸುಹೃದನ್ಯೋನವಿದ್ಯತೇ|
ಯಸ್ತು ದುಷ್ಕೃತಮಾದಾಯ ಸುಕೃತಂ ಸ್ವಂಪ್ರಯಚ್ಛತಿ||
'ನಿಂದಕನಂಥ ಮಿತ್ರನು ಲೋಕದಲ್ಲಿ ಬೇರೆ ಇಲ್ಲ. ಏಕೆಂದರೆ ಅವನು ದುಷ್ಕರ್ಮವನ್ನು ಅಪಹರಿಸಿ ಸುಕೃತವನ್ನೀಯುತ್ತಾನೆ' ಎನ್ನುತ್ತಾರೆ.

ಹೀಗೆ ಸಾಧುಸಂತರು ಯಾರಿಗೂ, ಯಾವುದಕ್ಕೂ ಅಂಜ ವುದಿಲ್ಲ. ಯಾರನ್ನೂ ಲೆಕ್ಕಿಸುವುದಿಲ್ಲ. ಅವರಿಗೆ ಶ್ರೀಪತಿಯೊರ್ವನೆ ಪ್ರಭು. ಅವನನ್ನೆ ಧ್ಯಾನಿಸುತ್ತ, ಪುರಂದರ ದಾಸರು ಹೇಳು ವಂತೆ,

'ನಾನಿನ್ನ ಧ್ಯಾನದೊಳಿರಲು ಹೀನಮಾನವರೇನು ಮಾಡಬಲ್ಲರು
ಕಿಚ್ಚಿಗೆ ಇರುವೆ ಮುಚ್ಚುವುದೆ... ....
ಧೂಳಲಿ ಕುದುರೆ ವೈಯಾರದಿ ಕುಣಿಯಲು,
ಧೂಳು ರವಿಯ ಮೇಲೆ ಮುಸುಕುವುದೆ ?
ಎಂದುಕೊಂಡು ನಿಶ್ಚಿಂತೆಯಿಂದ ಇರುತ್ತಾರೆ.

ನಿತ್ಯೋತ್ಸವೋ ಭವೇತ್ತೇಷಾಂ ನಿತ್ಯಶ್ರೀರ್ನಿತ್ಯಮಂಗಲಂ |

ಯೇಷಾಂ ಹೃದಿಸ್ಥೋ ಭಗವಾನ್ ಮಂಗಲಾಯತನಂ ಹರಿಃ ॥

ಯಾರ ಹೃದಯದಲ್ಲಿ ಮಂಗಳನಿಧಿಯಾದ ಹರಿ ಇರುವನೊ ಅವರಿಗೆ ನಿತ್ಯ ಸಂತೋಷ, ನಿತ್ಯ ಸಂಪತ್ತು, ನಿತ್ಯ ಮಂಗಳ ಉಂಟಾಗುವುದು. ಅವರು 'ನಾಹಂ ಕರ್ತಾ ಹರಿಃ ಕರ್ತಾ' ಎಂದುಕೊಳ್ಳುತ್ತ ರಾಗ ದ್ವೇಷಗಳಿಗೆ ಬಲಿಯಾಗದೆ ಕರ್ಮಾಚರಣ ಮಾಡುತ್ತಾರೆ. ಪಾಪಮಾಡುವುದಾಗಲಿ, ಪಾಪಮಾಡಿ ಪರಿತಾಪ ಪಡುವುದಾಗಲಿ ಅವರಿಗೆ ತಿಳಿಯದು. ಪಾಪಿ ಜನರ ಕೋಪಕ್ಕೂ ಇವರು ಸಿಲುಕುವುದಿಲ್ಲ.

"ವಿದ್ಯಾ ವಿನಯ ಸಂಪನ್ನೇ ಬ್ರಾಹ್ಮಣೇ ಗವಿಹಸ್ತಿನಿ ।
ಶುನಿಚೈವ ಶ್ವಪಾಕೇಚ ಪಂಡಿತಾಃ ಸಮದರ್ಶಿನಃ ॥

ಅವರು ಎಲ್ಲೆಡೆ ಭಗವಂತನನ್ನೆ ಕಂಡು ಆರಾಧಿಸುತ್ತಾರೆ. ಎಲ್ಲರ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗುತ್ತಾರೆ. ಎಲ್ಲರೂ ಅವನಿಗೆ ಬಂಧುಗಳಾಗುತ್ತಾರೆ.

'ಉದಾರ ಚರಿತಾನಾಂ ತು ವಸುಧೈವ ಕುಟುಂಬಕಂ' ಅವರು ಪಾಪಿಗಳನ್ನು ದ್ವೇಷಿಸುವುದಿಲ್ಲ. ಅವರ ಪಾಪವನ್ನು ಮಾತ್ರ ಕಂಡು ಸಹಿಸಲಾರರು. ತಂದೆ ತಾಯಿಗಳು ಮಕ್ಕಳಿಗೆ ಹೊಡೆಯುತ್ತಾರೆ. ಅವರ ಮೇಲಿನ ದ್ವೇಷದಿಂದಲ್ಲ, ಅವರ ನಡತೆಯ ಮೇಲಿನ ಅಸಮಾಧಾನದಿಂದ. ಹೀಗೆ ಎಲ್ಲರನ್ನೂ ಪ್ರೀತಿಸುವ ಸಾಧುಸಂತರಿಗೆ ಆಪತ್ತೆ ಬರಲು ಅಂಜುವುದು. ಕೊನೆಗೆ ಯಮನ ಪಾಶವೂ ಅವರಿಗೆ ಹೂಹಾರವಾಗುವುದು. ವಿಷ್ಣು ಲೋಕದ ಮಾರ್ಗ ತೆರೆದುಕೊಳ್ಳುವುದು.

ನಾಲ್ಕನೆಯದಾದ ರೂಪಕ ತಾಳದಲ್ಲಿ ಪರಗತಿಯನ್ನು ಸಾಧಿಸಿಕೊಳ್ಳ ಬಯಸುವವರಿಗೆ ಒಂದು ನೀತಿ ಸಂಹಿತೆ ಇದೆ. ಏಕೆಂದರೆ,

ನ ಕರ್ಮಣಾ ನ ಪ್ರಜಯಾ ಧನೇನ
ತ್ಯಾಗೇನೈಕೇ ಅಮೃತತ್ವ ಮಾನಶುಃ'

ಯಜ್ಞ ಯಾಗಗಳಿಂದಾಗಲಿ ಸಂತತಿಯನ್ನು ಪಡೆಯು ವುದರಿಂದಾಗಲಿ ಹಣದ ಬಲದಿಂದಾಗಲಿ ಪರಗತಿಯನ್ನು ಹೊಂದುವುದು ಸಾಧ್ಯವಿಲ್ಲ. ಫಲದಾಸೆ ತೊರೆದು ಭಗವಂತನಿಗೆ ಪ್ರೀತಿಯಾಗಲೆಂಬ ಮನೋಭಾವದಿಂದ ಸತ್ಕರ್ಮ ಮಾಡಿದರೆ ಮಾತ್ರ ಮೋಕ್ಷ ಲಭಿಸುವುದು.

ಶ್ರದ್ಧಯಾ ಸಾಧ್ಯತೇ ಧರ್ಮೋ ಮಹದ್ಭಿರ್ನಾರ್ಥ ರಾಶಿಭಿಃ ।
ನಿಷ್ಕಿಂಚನಾಸ್ತು ಮುನಯಃ ಶ್ರದ್ಧಾ ಧರ್ಮಾ ದಿವಂಗತಾಃ ॥

ಭಗವದಾರಾಧನೆಯಲ್ಲಿ ಶ್ರದ್ಧೆ ಇದ್ದರೆ ಮಾತ್ರ ಪ್ರವೃತ್ತಿ ನಿವೃತ್ತಿ ಧರ್ಮಗಳೆರಡೂ ಫಲಿಸುವುವು. ಹಣದ ದೊಡ್ಡ ರಾಶಿ ಗಳನ್ನೆ ಸೂರೆ ಮಾಡಿದರೂ ಪ್ರಯೋಜನವಿಲ್ಲ. ಯಾವ ಸಂಪತ್ತೂ ಇಲ್ಲದ ಮುನಿಗಳು ಕೇವಲ ಶ್ರದ್ಧೆಯ ಬಲದಿಂದಲೆ ಧರ್ಮವನ್ನು ಸಾಧಿಸಿಕೊಂಡು ಸ್ವರ್ಗಕ್ಕೋ ಮೋಕ್ಷಕ್ಕೋ ಹೋಗಿಲ್ಲವೆ ?

ಈ ಶ್ರದ್ಧೆ ಗುರುಭಕ್ತಿಯಿಂದ ಹುಟ್ಟಬೇಕು. ಅದರಿಂದಲೆ ಬೆಳೆಯಬೇಕು. ಅದರಿಂದಲೆ ಸ್ಥಿರತೆಯನ್ನು ಪಡೆಯಬೇಕು. ಗುರುಭಕ್ತಿ ಇಲ್ಲದ ಹರಿಭಕ್ತಿ ಮರದ ಆಸರೆಯಿಲ್ಲದ ಬಳ್ಳಿ

ಯಂತಾಗುತ್ತದೆ. ಶ್ರೀಹರಿಯು ಅದನ್ನು ಕೆಡವುತ್ತಾನೆ. ಗುರುವನ್ನೊಲ್ಲದವ ಹರಿಗೂ ದೂರ.

ಉತ್ತಮ ಭಗವದ್ಭಕ್ತರೆಲ್ಲ ಭಕ್ತನಿಗೆ ಗುರುಗಳು ಭಕ್ತಿಯಿಂದ ಸೇವೆಮಾಡಿ ಅವರ ಕರುಣೆಗೆ ಪಾತ್ರನಾಗಬೇಕು. ಗುರು ಕರುಣೆಯು ಸಾಕ್ಷಾತ್ಕಾರಕ್ಕೆ ಮಾತ್ರವಲ್ಲ, ಅದರ ಬಳಿಕ ಮುಕ್ತಿ ದೊರೆಯಲೂ ಅದು ಅವಶ್ಯಕ. ಭಗವಂತನನ್ನು ಕಂಡ ಭಾಗ್ಯಶಾಲಿ ತಾನೆಂದು ಗುರುವನ್ನು ಕಡೆಗಣಿಸಲಾಗದು. ಹರಿ ಮುನಿಯುತ್ತಾನೆ. ಮುಕ್ತಿಯನ್ನೇನೊ ಕೊಡುತ್ತಾನೆ. ಆತ್ಮನ ಸಚ್ಚಿದಾನಂದ ಸ್ವರೂಪಕ್ಕೆ ಪೂರ್ಣ ವಿಕಾಸವನ್ನು ಮಾತ್ರ ಕೊಡಲಾರ. ಆದ್ದರಿಂದಲೆ ಪುರಂದರದಾಸರು ಹೇಳಿದರು 'ಗುರುವಿನ ಗುಲಾಮನಾಗದ ತನಕ ದೊರೆಯದಣ್ಣಾ ಮುಕುತಿ'

ಗುರುಮುಖದಿಂದ ಹರಿಕಥೆಗಳನ್ನು ನಿತ್ಯ ಕೇಳುತ್ತಿರಬೇಕು. ಹರಿಭಕ್ತರು ಸಾಧಿಸಿದ ಮಹಾ ಯಶಸ್ಸಿನ ಪುಣ್ಯ ಕಥೆಗಳನ್ನು ನಿತ್ಯ ಕೇಳಬೇಕು. ಶಕ್ತಿ ಇದ್ದಲ್ಲಿ ವೇದ ಶಾಸ್ತ್ರಗಳ ಶ್ರವಣ ಮಾಡಬೇಕು. ಅವುಗಳೆಲ್ಲೆಲ್ಲ ಹರಿಯ, ಹರಿಭಕ್ತರ ಮಹಿಮೆಗಳೆ ತುಂಬಿವೆ. ಅವನ್ನು ಸದಾ ಅಧ್ಯಯನ ಮಾಡಬೇಕು.

'ಕ್ಷಣಶಃ ಕಣಶಶ್ಚೈವ ವಿದ್ಯಾಮರ್ಥಂಚ ಸಾಧಯೇತ್
ಕ್ಷಣತ್ಯಾಗೇ ಕುತೋವಿದ್ಯಾಕಣತ್ಯಾಗೇ ಕುತೋಧನಂ'

ಒಂದು ಕ್ಷಣವನ್ನು ಹಾಳು ಮಾಡದೆ ವಿದ್ಯಾಭ್ಯಾಸ

ಮಾಡಬೇಕು. ಒಂದು ಕಣವನ್ನು ವ್ಯರ್ಥಗೊಳಿಸದೆ ಧನಾರ್ಜನೆ ಮಾಡಬೇಕು.

'ಕಿಮನ್ಯೈರಸದಾಲಾಪ್ಯೈರಾಯುಃ ಘೋಯದಸದ್ವ್ಯಯಃ'

ಇರುವ ಅಲ್ಪ ಆಯುಷ್ಯವನ್ನು ಅನ್ಯಾಯವಾಗಿ ಕಳೆದು ಕೊಳ್ಳುವಂತೆ ಮಾಡುವ ಬೇರೆ ಹಾಳು ಹರಟೆಗಳಿಂದ ಏನು ಸುಖ ಪಡೆಯಲಾಗುತ್ತದೆ ?

'ತಸ್ಯತೇ್ಽಯಃ ಕಣೋಽನೀತ ಉತ್ತಮಶ್ಲೋಕವಾರ್ತಯಾ ಹರಿಕೀರ್ತನೆ ಮಾಡದ, ಕೇಳದ ಕ್ಷಣವೆ ವ್ಯರ್ಥ.

ಆದ್ದರಿಂದ ನಿತ್ಯ ಹರಿಕಥೆಗಳನ್ನು ಕೇಳಬೇಕು. ಹರಿ ಗುರುಗಳ ಕರುಣೆಯಿಂದ ಮುಕ್ತಿಸೋಪಾನಗಳನ್ನು ಒಂದೊಂದಾಗಿ ಸ್ಥಿರವಾಗಿ ಹತ್ತಬೇಕು. ಹಾಗೆ ಹತ್ತುವಾಗ ವಿಷಯಾಸಕ್ತಿಯ ಭಾರವನ್ನು ಹೊತ್ತಿರಬಾರದು.

'ಲಕ್ಷ್ಮೀಸ್ತೋಯ ತರಂಗ ಭಂಗ ಚಪಲಾ'

ಐಹಿಕ ಸಂಪತ್ತು ನೀರ ಅಲೆಯಂತೆ ಚಂಚಲ. ಅಪರೂ,

'ಮುಹೂರ್ತ ವಿಷಯಾಸ್ವಾದೋಽನೇಕ ಕಲ್ಪಾಂತ ದುಃಖದಃ' ಒಂದು ಮುಹೂರ್ತ ಕಾಲ ಮಾಡಿದ ವಿಷಯ ಭೋಗವು ಅನೇಕ ಕಲ್ಪಗಳಲ್ಲಿ ದುಃಖ ಉಣಿಸಬಲ್ಲುದು ಆದ್ದರಿಂದ ವಿಷಯಗಳಲ್ಲಿ ಆಸಕ್ತಿಯನ್ನು ತೊರೆಯಬೇಕು ವಿರಕ್ತಿ ತಾಳಬೇಕು. ವಿರಕ್ತಿಯಿದ್ದರೆ ತಪಸ್ಸಿಗಾಗಿ ಕಾಡಿಗೆ ಹೋಗಬೇಕಾಗಿಲ್ಲ.

'ವನೇಪಿ ದೋಷಾಃ ಪ್ರಭವಂತಿರಾಗಿಣಾಂ
ಗೃಹೇಪಿ ಪಂಚೇಂದ್ರಿಯ ನಿಗ್ರಹಸ್ತಪಃ ।
ಅಕುತ್ಸಿತೇಕರ್ಮಣಿಯಃ ಪ್ರವರ್ತತೇ
ನಿವೃತ್ತರಾಗಸ್ಯ ಗೃಹಂ ತಪೋವನಂ ॥'

ವಿಷಯ ಲೋಲುಪರು ಕಾಡಿಗೆ ಹೋದರೂ ತಪಸ್ಸು ಸಿದ್ಧಿಸುವುದಿಲ್ಲ. ಪಂಚೇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡವನು ಮನೆಯಲ್ಲಿಯೆ ತಪಸ್ಸನ್ನು ಸಾಧಿಸಿಕೊಳ್ಳಬಲ್ಲ. ವಿರಕ್ತಿ ಉಳ್ಳವನಾಗಿ ಒಳ್ಳೆಯ ಕರ್ಮಗಳನ್ನು ಆಚರಿಸುವವನಿಗೆ ಮನೆಯೆ ತಪೋವನ.

ಹರಿಕಥೆಗಳನ್ನು ಕೇಳಿ ಸಂಪಾದಿಸಿದ ಜ್ಞಾನ, ಇಂದ್ರಿಯ ನಿಗ್ರಹದಿಂದ ಬೆಳೆಸಿಕೊಂಡ ವೈರಾಗ್ಯ. ಇವೆರಡು ಅಂತಃಕರಣ ಶುದ್ಧಿ ಉಂಟುಮಾಡಿ ಅಲ್ಲಿ ವಿಷ್ಣುವಿನಆರಾಧನೆಯನ್ನು ಭಕ್ತಿಯಿಂದ ಮಾಡಲು ಯೋಗ್ಯಸ್ಥಳವನ್ನು ಸಿದ್ಧಪಡಿಸುತ್ತವೆ. ಅವಿದ್ಯಾರಾಗಗಳ ಮಲಮೂತ್ರಗಳನ್ನು ತೆಗೆದು ಶುದ್ಧಿಮಾಡಲು ಜ್ಞಾನಜಲ ಮತ್ತು ವೈರಾಗ್ಯದ ಮೃತ್ತಿಕೆ ಇವೆರಡೂ ಬೇಕು.

'ಜ್ಞಾನಾಮಲಾಂಭಸಾ ಪುಂಸಃ ಸದ್ವೈರಾಗ್ಯಮೃದಾ ಪುನಃ।
ಅವಿದ್ಯಾರಾಗ ವಿಣ್ಮೂತ್ರಲೇಪೋ ನಶ್ಯೇ ದ್ವಿಶೋಧನೈಃ॥'

ಶ್ರೋತ್ರಿಯ ಕರ್ಮಠನಾದ ಬ್ರಾಹ್ಮಣನೂ ಒಮ್ಮೆ ಆಸೆಯಿಂದ ದಾನದಕ್ಷಿಣೆಗಳಿಗೆ ಕೈಯೊಡ್ಡಿದನೆಂದರೆ ಅವನ ಪುಣ್ಯ ಹ್ರಾಸವಾಗಿ ಹಾಲು ಕರೆದ ದನದಂತಾಗುವನು. ದನವು ಹುಲ್ಲು ನೀರು ಸೇವಿಸಿ ತಿರುಗಿ ಹಿಂದಿನಂತಾಗುತ್ತದೆ. ಬ್ರಾಹ್ಮಣನು

ಜಪ ಹೋಮಗಳಿಂದ ಪೂರ್ವಸ್ಥಿತಿಗೆ ಬರಬೇಕು.

'ಅರ್ಚಿತಃ ಪೂಜಿತೋ ವಿಪ್ರೋ ಮಗ್ನಾಗೌರಿವಗಚ್ಛತಿ ।
ಪುನರಾಪ್ಯಾಯತೇ ಧೇನುಃ ಸತೃಣೈಃ ಸಲಿಲೈರ್ಯಥಾ।
ಏವಂಜಪೈಶ್ಚ ಹೋಮೈಶ್ಚ ಪುನರಾಪ್ಯಾಯತೇ ದ್ವಿಜಃ ||'

ಆದರೆ ವಿಷಯ ಸುಖವೂ ದುಃಖ ಮಿಶ್ರಿತವಾಗಿದೆ ಎಂಬ ಕಾರಣದಿಂದ ಅದನ್ನು ಬಿಟ್ಟು ಬಿಡುವುದು ಅವ್ಯವಹಾರ್ಯ ವಲ್ಲವೆ ? ಇನ್ನೂ ಉತ್ತಮವಾದ ಬೇರೆ ಸುಖ ಒಂದಿದ್ದರೆ ಅದ ಕ್ಕಾಗಿ ಈ ಸುಖವನ್ನು ಬಿಡುವುದು ಶಕ್ಯ. ಅದಿಲ್ಲದಿದ್ದರೆ ಅನಾ ಯಾಸವಾಗಿ ಸಿಗುವ ಈ ಸುಖವನ್ನು ಏಕೆ ಬಿಡಬೇಕು ?

'ನ ಹಿ ಮೃಗಾಃ ಸಂತೀತಿ ಶಾಲಯೋ ನೋಪ್ಯಂತೇ।
ನ ಹಿ ಭಿಕ್ಷುಕಾಃ ಸಂತೀತಿ ಸ್ಥಾಲ್ಯೋ ನಾಧಿಶ್ರಿಯಂತೇ।'

ಮೃಗಗಳು ಬಂದು ಬೆಳೆಯನ್ನು ತಿಂದು ಹಾಕುತ್ತವೆ ಎಂದು ಬೇಸಾಯವನ್ನ ಮಾಡದಿರುತ್ತಾರೆಯೇ ? ಭಿಕ್ಷುಕರು ಬೇಡಲು ಬರುತ್ತಾರೆಂದು ಅಡಿಗೆಯನ್ನ ಮಾಡದಿರುವರೆ ? ಎಂಬ ಪ್ರಶ್ನೆ ಉದ್ಭವಿಸಬಹುದು. ಅದಕ್ಕೆ ರಾಜರು ಬಿತ್ತರಿಸಿ ದ್ದಾರೆ—'ವಿಷ್ಣುವಿನಾರಾಧನೆ ಬೇಕು.

ವಿಷ್ಣುವಿನಾರಾಧನೆಗೆ ಬೇಕಾದ ಅಂತರಂಗ ಶುದ್ಧಿಗೆ ವೈರಾಗ್ಯ ಬೇಕೆನ್ನುವುದು ನಿಜ. ಆದರೆ ಮೊದಲಿಗೆ ವಿಷ್ಣುವಿನಾ ರಾಧನೆಯನ್ನು ಮಾಡಿ ಅದರ ಬಲದಿಂದ ವೈರಾಗ್ಯ ಪಡೆಯ ಬೇಕು. ಬಳಿಕ ಆ ವೈರಾಗ್ಯದ ಬಲದಿಂದ ಇನ್ನೂ ಉತ್ತಮ ರೀತಿ

ಯಿಂದ ವಿಷ್ಣುವನ್ನಾರಾಧಿಸಬೇಕು. ವಿಷ್ಣುವಿನಾರಾಧನೆಯಲ್ಲಿ ಅಲೌಕಿಕವಾದ ಸುಖವಿದೆ. ಏಕೆಂದರೆ ಸೌಂದರ್ಯ ಮಾಧುರ್ಯ ಗಳಂಥ ಎಲ್ಲಗುಣಗಳೂ ತುಂಬಿದ್ದು ಅತ್ಯಾಕರ್ಷಕನೆನಿಸಿದವನು ಲೋಕದಲ್ಲಿ ವಿಷ್ಣು ಒಬ್ಬನೆ. ಆದ್ದರಿಂದಲೆ ಅವನು ವಿಷ್ಣು ಎನಿಸಿದ್ದಾನೆ. ಈ ಭಾವನೆಯಿಂದ ಅವನನ್ನು ಧ್ಯಾನಿಸಿದರೆ ಆನಂದ ಉಂಟಾಗುತ್ತದೆ. ಅದನ್ನು ಅನುಭವಿಸಿಯೆ ನೋಡಬೇಕು. ಇಲ್ಲದಿದ್ದರೆ ವಿಷಯಸುಖವನ್ನೆ ನಿಜವಾದ ಸುಖವೆಂದು ಭ್ರಮಿಸಿರುವ ನಾವು ಅದನ್ನು ಬಿಡಲೊಲ್ಲೆವು. ಬಾಲಕ ಅಶ್ವತ್ಥಾಮನಿಗೆ ಹಿಟ್ಟು ಕಲಸಿದ ನೀರೆ ಹಾಲಾಗಿತ್ತು. ಕೌರವನ ಮನೆಯಲ್ಲಿ ಹಾಲು ಕುಡಿದ ಮೇಲೆ ಮನೆಗೆ ಬಂದು ನಿಜವಾದ ಹಾಲಿಗಾಗಿ ಅಳತೊಡಗಿದಂತೆ, ವಿಷಯಸುಖ ನಿಜವಾದ ಸುಖವಲ್ಲ ; ಮಾತ್ರವಲ್ಲ, ವಿಷವೆ ಆಗಿದೆ.

'ವಿಶವತ್ ವಿಷಯಾಸಾಹುಃ;

ವಿಷವನ್ನು ದೂರ ಮಾಡುವವನು ವಿಷ್ಣು. 'ವಿಷಂ ನಯತೀತಿ ವಿಷ್ಣುಃ' ವಿಷವನ್ನು ದೂರಮಾಡಿ ಅಮೃತವನ್ನುಣಿಸುವ ವಿಷ್ಣುವಿನಾರಾಧನೆಯನ್ನು ಮಾಡಬೇಕು. ವಿಷಯಾಸಕ್ತಿಯ ವಿಷವರ್ತುಲವನ್ನು ದಾಟಿ ಹೊರಗೆ ಬರಬೇಕು, ಇನ್ನೂ ಉತ್ತಮ ರೀತಿಯಿಂದ ವಿಷ್ಣುವಿನಾರಾಧನೆ ಮಾಡಬೇಕು.

'ಸೋಪಾಸನಾ ಚ ದ್ವಿವಿಧಾ ಶಾಸ್ತ್ರಾಭ್ಯಾಸ ಸ್ವರೂಪಿಣೀ
ಧ್ಯಾನ ರೂಪಾ ಪರಾಚೈವ'

ವಿಷ್ಣುವಿನ ಉಪಾಸನೆಯನ್ನು ಶಾಸ್ತ್ರಾಭ್ಯಾಸ, ಧ್ಯಾನ

ಎಂದು ಎರಡು ಬಗೆಯಿಂದ ಮಾಡಬಹುದು. ಧ್ಯಾನವೆಂದರೆ ಉತ್ತಮವಾದ ವಿಷ್ಣು ಮಂತ್ರಗಳನ್ನು ಜಪಿಸುತ್ತ ತನ್ನ ಶ್ರದ್ಧೆಗನುಗುಣವಾಗಿ ಪ್ರತಿಮೆ ಸಾಲಗ್ರಾಮಗಳಲ್ಲಿಯೋ ಗೋಬ್ರಾಹ್ಮಣರಲ್ಲಿಯೊ ಅಥವಾ ತನ್ನಾತ್ಮದಲ್ಲಿಯೊ ವಿಷ್ಣುವನ್ನು ಅವನ ಗುಣಸೌಂದರ್ಯಗಳನ್ನು ನಿರಂತರ ನೆನೆಯುವುದು.

"ಅರ್ಚಾದಿಷು ಪರಂಯತ್ರಶ್ರದ್ಧಾವಾನ್ ತತ್ರ ಚಾರ್ಚಯೇತ್ ।
ಸರ್ವಭೂತೇಷ್ವಾತ್ಮನಿಚ ಸರ್ವಾತ್ಮಾನಮವಸ್ಥಿತಂ ॥

ಶಾಸ್ತ್ರಾಭ್ಯಾಸವೆಂದರೆ ವೇದಶಾಸ್ತ್ರಗಳನ್ನು ವಿಧಿವತ್ತಾಗಿ ಶ್ರವಣ ಮಾಡುವುದು ಮನನ ಮಾಡುವುದು ಮತ್ತು ಶಿಷ್ಯರಿಗೆ ಪ್ರವಚನ ನೀಡುವುದು. ಇವೆ ನಿಜವಾದ ತಪಸ್ಸು 'ಸ್ವಾಧ್ಯಾಯ ಪ್ರವಚನ ಏವೇತಿ ನಾ ಕೋಮೌದ್ಗಲ್ಯಃ' ಎಂದು ಉಪನಿಷತ್ತು ಘೋಷಿಸುತ್ತದೆ.

ಈ ಎರಡು ಬಗೆಯ ಉಪಾಸನೆಯ ಜೊತೆಗೆ ಅಂತರಂಗ ಶುದ್ಧಿಯ ರಕ್ಷಣೆಗಾಗಿ ಮತ್ತು ಹರಿಯ ಅನುಗ್ರಹಕ್ಕಾಗಿ ಪರಿಪರಿಯ ವ್ರತ ಉಪವಾಸಗಳನ್ನು ಮಾಡಬೇಕು. ಮಾಡಿ ಶ್ರೀಕೃಷ್ಣಾರ್ಪಣಮಸ್ತು' ಎನ್ನಬೇಕು. ಶ್ರೀಪತಿ ಹಯವದನನ ಪರಮಾನುಗ್ರಹ ಒಂದನ್ನೇ ಬೇಡಬೇಕು. ಬೇರಾವ ಐಹಿಕ ಫಲವನ್ನೂ ಬೇಡಬಾರದು. ಯೋಗಾಭ್ಯಾಸದಿಂದ ಅಣಿಮಾದಿ ಅಷ್ಟೈಶ್ವರ್ಯ ಸಿದ್ಧಿ ಲಭಿಸಿದರೂ ಅದರಲ್ಲಿ ಆಸಕ್ತಿ ಇಡಬಾರದು. ವಿಷಯನಿಗ್ರಹ ಬೇಕು. ಅದೊಂದಿಲ್ಲದಿದ್ದರೆ ಮೋಕ್ಷ ಸಾಧನೆ ಅರ್ಧದಲ್ಲೇ ನಿಲ್ಲಬೇಕಾದ ಪರಿಸ್ಥಿತಿ ಉಂಟಾಗುತ್ತದೆ.

ಐದನೆಯದಾದ ಝುಂಪೆತಾಳದಲ್ಲಿ ಸಾಧಕನ ಆಚಾರ ವಿಚಾರಗಳಲ್ಲಿ ಎಂಥ ಶುದ್ಧಿ ಬೇಕೆಂಬುದನ್ನು ವರ್ಣಿಸಲಾಗಿದೆ. ಮೊದಲಿಗೆ ವಿಚಾರದ ಬಗ್ಗೆ ಒಂದು ಎಚ್ಚರಿಕೆ—ಉಪಾಸನೆಯ ಮಾರ್ಗ ಅಷ್ಟೇನೂ ವಿಶಾಲವಲ್ಲ. 'ತಂ ಯಥಾ ಯಥೋ ಪಾಸತೇ ತದೇವ ಭವತಿ' ಭಗವಂತನನ್ನು ಯಾವ ರೀತಿಯಿಂದ ಉಪಾಸನೆ ಮಾಡುವನೋ ಆ ರೀತಿಯ ಫಲವನ್ನು ಹೊಂದುತ್ತಾನೆ. 'ಯೇ ಯಥಾ ಮಾಂ ಪ್ರಪದ್ಯಂತೆ ತಾಂ ಸ್ತಥೈವ ಭಜಾಮ್ಯಹಂ' ಯಾರು ಹೇಗೆ ನನ್ನನ್ನು ಉಪಾಸನೆಮಾಡುವರೊ ಅವರಿಗೆ ಆ ರೀತಿಯ ಫಲವನ್ನೆ ಕೊಡುತ್ತೇನೆ. ಎಂದು ಮುಂತಾದ ಮಾತುಗಳನ್ನು ಹೇಳಿಕೊಳ್ಳುತ್ತ ಮನ ಬಂದಂತೆ ಉಪಾಸನೆ ಮಾಡಿದರೆ ಫಲವಿಲ್ಲ, ಮಾತ್ರವಲ್ಲ, ಅಪಾಯ ಉಂಟಾಗುವ ಸಂಭವವೂಇದೆ.

'ನ ಚ ರಮಂತ್ಯಹೋ ಅಸದುಪಾಸನಯಾತ್ಮಹನಃ |' 'ಅಸತ್ಯನಿಷ್ಠವಾದ ಉಪಾಸನೆಯಿಂದ ಆತ್ಮನನ್ನು ಕೊಲ್ಲುವವರು ಸುಖ ಹೊಂದುವುದಿಲ್ಲ' ಎಂದು ಶ್ರುತಿಗೀತೆ ಎಚ್ಚರಿಸುತ್ತದೆ.

'ಅಚೇತನಾಸತ್ಯಾಯೋಗ್ಯಾನ್ಯನುಪಾಸ್ಯಾನ್ಯಫಲತ್ವ ವಿಪರ್ಯಯಾಭ್ಯಾಂ' ಅಂದರೆ, 'ಜಡವಸ್ತುಗಳನ್ನೂ ಕಾಲ್ಪನಿಕ ಪದಾರ್ಥಗಳನ್ನೂ ತನಗೆ ಯೋಗ್ಯವಲ್ಲದ ವಿಷಯಗಳನ್ನೂ ಉಪಾಸನೆ ಮಾಡಕೂಡದು. ಅದರಿಂದ ಫಲವಿಲ್ಲ. ವಿಪರೀತ ಫಲವೂ ಉಂಟಾಗುತ್ತವೆ. ಎಂದು ಸಂಕರ್ಷಣ ಸೂತ್ರದಲ್ಲಿ ಸಿದ್ಧಾಂತ ಮಾಡಲಾಗಿದೆ.

ಶ್ರಿಹರಿಯನ್ನು ಉಪಾಸನೆ ಮಾಡುವಾಗ ಅವನು ಅನಂತ ಕಲ್ಯಾಣಗುಣಾಕರ, ತ್ರಿಗುಣಾತೀತ, ಪರಮಸುಂದರಾಕಾರ

ವುಳ್ಳ ಪರಮ ಪುರುಷ ಎಂದು ಉಪಾಸನೆ ಮಾಡಬೇಕು. ಇದು ಸತ್ಯನಿಷ್ಠವಾದ ಉಪಾಸನೆ. ಇದರಿಂದ ಆತ್ಮನ ಎಲ್ಲ ಸದ್ಗುಣಗಳೂ ತಮ್ಮ ಸ್ವಾಭಾವಿಕ ಸುಂದರಾಕಾರದಲ್ಲಿ ಅಭಿವ್ಯಕ್ತವಾಗುತ್ತವೆ. ಇದಕ್ಕೆ ವ್ಯತಿರಿಕ್ತವಾಗಿ ಶ್ರೀಹರಿಯಲ್ಲಿ ಗುಣಗಳಿಲ್ಲ, ಅವನಿಗೆ ಆಕಾರವಿಲ್ಲ ಎಂದು ಉಪಾಸನೆ ಮಾಡಿದರೆ ವಿಪರೀತ ಫಲ ಉಂಟಾಗುತ್ತದೆ. ಶ್ರೀಹರಿ ಸಕಲಸುರರೊಡೆಯ, ದೇವತೆಗಳೆಲ್ಲರೂ ಆವನ ಕಿಂಕರರು ಎಂದು ಉಪಾಸನೆ ಮಾಡಬೇಕು. ಆಗ ಆತ್ಮನು ಮೋಕ್ಷದಲ್ಲಿ ತನಗಿಂತ ಕಡಿಮೆ ಸದ್ಗುಣ ಉಳ್ಳವರೆಲ್ಲರಿಗೂ ತಾನು ಒಡೆಯನಾಗಿದ್ದು ಆನಂದಿಸುವನು. ಶ್ರೀಹರಿ ಜನನ ಮರಣ ಮುಂತಾದ ದೋಷಗಳಿಗೆ ಬಹು ದೂರನೆಂದು ಉಪಾಸನೆ ಮಾಡಬೇಕು. ಅದರಿಂದ ಆತ್ಮನಿಗೆ ಈಗ ಪ್ರಕೃತಿ ಬಂಧನದಿಂದ ಉಂಟಾಗುತ್ತಿರುವ ಜನನ ಮರಣ ಮುಂತಾದ ಬವಣೆಗಳು ದೂರವಾಗುತ್ತವೆ. ಈ ಅಭಿಪ್ರಾಯದಿಂದಲೆ "ತಂ ಯಥಾಯಥೋಪಾಸತೇ ..." 'ಯೋಯಥಾ ಮಾಂ ... ಎಂದು ಮುಂತಾದ ಶ್ರುತಿಸ್ಮೃತಿಗಳು ಹೊರಟಿವೆ.

ಈ ವಿಚಾರಶುದ್ಧಿ ಆಚಾರ ಶುದ್ಧಿಯೊಂದಿಗೆ ಸೇರಬೇಕು. ಸಾಧಕನು ಸದಾಚಾರನಿರತನಾಗಬೇಕು. ಆಚಾರ ಹೇಗಿದ್ದರೇನು ? ಅಂತರಂಗದಲ್ಲಿ ಶುದ್ಧನಾಗಿದ್ದರೆ ಸಾಕೆನ್ನುವುದು ಆತ್ಮವಂಚನೆಯೆ ಸರಿ. ಏಕೆಂದರೆ,

'ಶ್ರುತಿಸ್ಮೃತೀ ಮಮೈವಾಜ್ಞಾ ಯಸ್ತಾಮುಲ್ಲಂಘ್ಯವರ್ತತೇ ।
ಆಜ್ಞಾಚ್ಛೇದೀ ಮಮದ್ರೋಹೀ ಮದ್ಭಕ್ತೋಽಪಿ ನ ಸಂಶಯಃ ॥'

ಅರ್ಥಾತ್ ಶ್ರುತಿಸ್ಮೃತಿಗಳು ನನ್ನ ಆಜ್ಞೆಗಳೆ ಆಗಿವೆ. ಆವನ್ನು

ಉಲ್ಲಂಘಿಸುವವನು ನನ್ನ ಆಜ್ಞೆಯನ್ನು ಮೀರಿ ನನಗೆ ದ್ರೋಹ ಮಾಡಿದಂತಾಗುತ್ತದೆ. ಅವನು ನನ್ನ ಭಕ್ತನೆ ಆಗಿದ್ದರೂ ದ್ರೋಹಿ ಎಂದೆ ಬಗೆಯುತ್ತೇನೆ' ಎಂದು ಶ್ರೀಹರಿಯು ಹೇಳಿದ್ದಾನೆ ಒಬ್ಬನಿಗೆ ಹರಿಯಲ್ಲಿ ಭಕ್ತಿ ಇದೆ, ಆದರೆ ಅವನಾಜ್ಞೆ ಮೀರಿ ದ್ರೋಹ ಬಗೆ ಯುತ್ತಾನೆ' ಎಂಬುದು ಅರ್ಥವಿಲ್ಲದ ಮಾತು. ಆದ್ದರಿಂದ ಆಚಾರ ವಿಚಾರಗಳಲ್ಲಿ ಹೊಂದಿಕೆ ಇಲ್ಲದವನು ಡಾಂಭಿಕನೆಂದೆ ತಿಳಿಯಬೇಕು. ಹರಿಸ್ಮರಣೆ ಮಾಡುವವನು ದುರಾಚಾರಿಯಾಗ ಲಾರ. ದುರಾಚಾರಿ ಹರಿಸ್ಮರಣೆ ಮಾಡಲಾರ. ಹರಿಸ್ಮರಣೆಗೆ ವಿರೋಧಿ ದುರಾಚಾರ.

ಆದ್ದರಿಂದ ಸದಾಚಾರ ನಿರತನಾಗಿದ್ದು ಶೇಷಗಿರಿಯರಸ ನನ್ನು ಸ್ಮರಿಸುವವನು ಸಂಸಾರ ಭಯವನ್ನು ದಾಟುತ್ತಾನೆ. ಮೃತ್ಯುವಿಗೆ ಮೃತ್ಯುವೆನಿಸಿದ ಶ್ರೀಹರಿಯ ಸ್ಮರಣೆಯಿಂದ ಮೃತ್ಯು ಭಯಕ್ಕೆ ಸರಿಯಾದ ಉತ್ತರ ನೀಡುತ್ತಾನೆ. ಮೃತ್ಯುಭಯವನ್ನೆ ದಾಟುತ್ತಾನೆ.

ಆರನೆಯದಾದ ಆದಿತಾಳದಲ್ಲಿ ಅದ್ವೈತ ಉಪಾಸನೆಯನ್ನು ನಿರಾಕರಿಸಲಾಗಿದೆ. 'ಸೋಽಹಂ' ಉಪಾಸನೆ ಸತ್ಯನಿಷ್ಠವಲ್ಲ ಎನ್ನು ತ್ತಾರೆ ರಾಜರು. ನಿತ್ಯಮುಕ್ತಳಾಗಿದ್ದು ಸಂಸಾರದ, ಜನನ ಮರಣದ ನೋವನ್ನೆ ಕಂಡರಿಯದ ಜಗನ್ಮಾತೆಯಾದ ಶ್ರೀದೇವಿಗೂ ನಾಥನೆನಿಸಿದ ಜಗನ್ನಾಥ ಶ್ರೀಹರಿ. ನಾನಾ ವಿಧದ ಹೀನ ಜನ್ಮ ಗಳನ್ನೆತ್ತಿ ಸದಾ ನೋವನ್ನುಣ್ಣುವ ಅಲ್ಪ ಜೀವಿ ಮಾನವ ಇಬ್ಬರು ಒಂದಾಗುವ ಶಕ್ಯವಿದೆಯೇ ? ನಾಯಿ ಎಷ್ಟು ಅಬ್ಬರಿಸಿ ಬೊಗಳಿದರೂ ಸೂರ್ಯಮಂಡಲದೆತ್ತರಕ್ಕೆ ಅದು ಎಂದಾದರೂ

ಏರ ಬಲ್ಲುದೆ ? "ಆಕಾಶ ಒಂದೇ ಆಗಿದ್ದರೂ ಮನೆಯ ನಾಲ್ಕು ಗೋಡೆಗಳಿಂದ ಆವೃತವಾದ ಅವಕಾಶ ಮನೆಯ ಒಳಗಿನದು, ಬೇರೆಲ್ಲ ಹೊರಗಿನದು ಎಂಬ ಭೇದ ಮನೆ ಇರುವಷ್ಟು ಕಾಲ ಇರಬಹುದು. ಮನೆಯೆ ಮುರಿದು ಹೋದರೆ ಮನೆಯ ಒಳ ಹೊರಗು ಬೇರೆ ಬೇರೆಯಾಗಿ ಇರುವುದಿಲ್ಲ. ಹಾಗೆಯೆ ಅವಿದ್ಯೆ ಯಿಂದ ಆವೃತವಾದ ಪರಬ್ರಹ್ಮ ಜೀವನಾಗಿ ಬೇರ್ಪಟ್ಟರೂ ಮೋಕ್ಷದಲ್ಲಿ ಅವಿದ್ಯೆ ನಾಶವಾಗಿರುವುದರಿಂದ ಭೇದವಿರುವುದಿಲ್ಲ" ಎಂಬ ಒಂದು ವಾದವಿದೆ. ಅದಕ್ಕೆ ಉತ್ತರ ಇಲ್ಲಿ ಶ್ರೀನಾಥ ಎಂಬ ಪದದಲ್ಲಿ ಸಿಗುತ್ತದೆ. ನಿತ್ಯಮುಕ್ತರಾದ ಲಕ್ಷ್ಮೀನಾರಾಯಣರ ನಡುವೆ ಅವಿದ್ಯೆಯ ಗೋಡೆ ಇರಲು ಶಕ್ಯವಿಲ್ಲ. ಆದರೂ ಅವರಲ್ಲಿ ಸತಿ-ಪತಿ ಭಾವವಿದೆ, ಭೇದವಿದೆ. ಆದ್ದರಿಂದ ಭೇದವು ಅವಿದ್ಯೆಯ ಸೃಷ್ಟಿಯಲ್ಲ. ಸ್ವಾಭಾವಿಕವಾಗಿಯೆ ಜೀವಪರಮಾತ್ಮರಿಗೆ ಭೇದ ವಿದೆ. ಮೋಕ್ಷದಲ್ಲಿಯೂ ಜೀವನು ಪರಮಾತ್ಮನಿಗೆ ಅಧೀನ ನಾಗಿರುತ್ತಾನೆ. ಈ ದಾಸ್ಯ ಪಾರತಂತ್ರ್ಯ ಮೋಕ್ಷದಲ್ಲಿಯೂ ಇದ್ದರೆ ಏನು ಸುಖ ಎಂಬ ಪ್ರಶ್ನೆಗೂ ಶ್ರೀನಾಥ ಎಂಬ ಪದ ದಲ್ಲಿಯೆ ಉತ್ತರ ಅಡಗಿದೆ. ಶ್ರೀದೇವಿ ಹರಿಯ ಚರಣದಾಸಿ ಯಾಗಿದ್ದೇ ಅನಿರ್ವಚನೀಯವಾದ ಆನಂದ ಪಡೆಯುವುದಿಲ್ಲವೆ? ಆನಂದ ರೂಪಿಯಾದ ಜೀವನೂ ಪರಮಾನಂದ ರೂಪಿಯಾದ ಹರಿಯ ದಾಸ್ಯದಲ್ಲಿ ಆನಂದ ಕಂಡರೆ ಅಚ್ಚರಿ ಏನಿಲ್ಲ. ದಾಸ್ಯ ಪಾರತಂತ್ರ್ಯಗಳೆ ದುಃಖಕ್ಕೆ ಕಾರಣವಲ್ಲ, ರಾಗದ್ವೇಷಗಳೆ ಕಾರಣ. ಅವುಗಳಿಗೆ ಮೋಕ್ಷದಲ್ಲಿ ಅವಕಾಶವಿಲ್ಲ.

**ದಾನವ ಕುಲವೈರಿ ನಮ್ಮ ಶ್ರೀನಿವಾಸ.** ಈ ಮಾತೂ ಅರ್ಥಪೂರ್ಣವಾಗಿದೆ. ತಾನೆ ಇಂದ್ರ, ತಾನೆ ಅಗ್ನಿ, ಯಮ

ಎಂದು ಮುಂತಾಗಿ ಅನ್ನುತ್ತ ಎಲ್ಲ ಲೋಕಗಳನ್ನು ಆಕ್ರಮಿಸ ಲೆಳಸುವ ದಾನವರಿಗೆ ಕುಲಶತ್ರುವೆನಿಸಿದವ, ಶ್ರೀನಿವಾಸ. ತಾನೆ ಹರಿ ಎನ್ನುವವರನ್ನು ಆತ ಸುಮ್ಮನೆ ಬಿಟ್ಟಾನೆ ?

ಇಲ್ಲಿ ಒಂದು ಪ್ರಶ್ನೆ—'ನಾನೆ ಹರಿ' ಎಂದುಕೊಳ್ಳುವವರು ಹಾಗೇ ಅಂದುಕೊಳ್ಳಲಿ. ನಾಯಿ ಬೊಗಳಿದರೆ ದೇವಲೋಕ ಹಾಳಾದೀತೆ ? ಹರಿ ಏಕೆ ಕೋಪಿಸಿಕೊಳ್ಳಬೇಕು ? ಅವನಿಗೆ ಅದರಿಂದ ಏನು ಅನಿಷ್ಟ ? ಅನಿಷ್ಟವೇನಿಲ್ಲ. ಅವನು ಪೂರ್ಣಾನಂದ, ಪೂರ್ಣಕಾಮ. ಅವನು ಕೋಪಿಸಿಕೊಳ್ಳುವುದೂ ಇಲ್ಲ. ಕೋಪವೆಂಬುದು ಮನೋದೌರ್ಬಲ್ಯದ ಒಂದು ಮುಖ. ಅದಕ್ಕೆ ಹರಿಯಲ್ಲಿ ಅವಕಾಶವಿಲ್ಲ'. ಆದರೆ,

'ಅಸುರಾ ಅಪ್ರಿಯಾಶ್ಚಾಪಿ
ನಿತ್ಯಾನಂದಾನ್ನ ಲೋಕವತ್ ।
ನಿಷೇಧ್ಯ ಬುದ್ಧಿವಿಷಯ
ಮಪ್ರಿಯಂ ಹಿ ಹರೇರ್ಮತಂ ॥

ಅಸುರರು ಹರಿಗೆ ಪ್ರಿಯರಲ್ಲದವರು, ಅಂದರೆ ನಿತ್ಯಾನಂದ ಪೂರ್ಣನಾದ ಹರಿಗೆ ಲೋಕದ ಜನರಂತೆ ಪ್ರಿಯ ಅಪ್ರಿಯವೆಂಬ ಭೇದವಿದೆ ಎಂದು ಅರ್ಥವಲ್ಲ. ಸಂಸಾರ ದುಃಖದಿಂದ ಬೇಯುವ ಜೀವರ ಹಿತಕ್ಕಾಗಿ ಕೆಲವು ವಿಧಿ ನಿಷೇಧಗಳಿವೆ. ನಿಷೇಧಕ್ಕೆ ಒಡುವವರು ಹರಿಗೆ 'ಅಪ್ರಿಯ'ರೆನಿಸುತ್ತಾರೆ. ಪ್ರಕೃತದಲ್ಲಿ ಹೀನ ಮಾನವನು ತಾನೆ ಹರಿ ಎಂದರೆ ಮಾನವ ಸಹಜವಾದ ಲೋಪದೋಷಗಳಿಲ್ಲವನ್ನೂ ಒಂದೆ ಮಾತಿನಿಂದ ಹರಿಯಲ್ಲಿ

ಆರೋಪಿಸಿದಂತಾಗುತ್ತದೆ. ಇದಕ್ಕಿಂತ ಹೆಚ್ಚಿನ ವಿಷ್ಣುನಿಂದೆ ಬೇರೆ ಇಲ್ಲ. ವಿಷ್ಣುನಿಂದೆ ಪ್ರಾಯಶ್ಚಿತ್ತವೆ ಇಲ್ಲದ ಒಂದು ಮಹಾಪಾತಕ.

'ದ್ವಯೋರ್ವೈ ನಿಷ್ಕೃತಿರ್ನಾಸ್ತಿ
ಪಾಪಪುಂಜಕೃತೋಸ್ತಯೋಃ |
ಮತ್ವಾ ಗೋವಧಕರ್ತುಶ್ಚ
ನಾರಾಯಣ ವಿನಿಂದಿತುಃ ||

ಬುದ್ಧಿಪೂರ್ವಕವಾಗಿ ಗೋವಧೆ ಮಾಡುವವನಿಗೂ ವಿಷ್ಣು ನಿಂದೆ ಮಾಡುವವನಿಗೂ ಪ್ರಾಯಶ್ಚಿತ್ತವಿಲ್ಲ. ಇಬ್ಬರೂ ಪಾಪದ ರಾಶಿಗಳನ್ನೆ ಮಾಡಿರುತ್ತಾರೆ.

'ಯಶ್ಚಾವ ಮನ್ಯೇತ ಹರಿಂತಂ ಗಂಗಾ ನ ಪುನಾತಿ ಹಿ ।'

ಹರಿಯನ್ನು ತಿರಸ್ಕರಿಸಿದವನಿಗೆ ಗಂಗಾಸ್ನಾನದಿಂದಲೂ ಶುದ್ಧಿ ಇಲ್ಲ.

ಹೀಗೆ ವಿಷ್ಣುನಿಂದೆ ನಿಷಿದ್ಧವಾಗಿರುವುದರಿಂದ 'ನಾನೆ ಹರಿ' ಎಂಬ ಭಾವನೆಯೂ ನಿಷಿದ್ಧ. ವಿಧಿ ನಿಷೇಧಗಳೆರಡೂ ಹರಿಯ ಆಜ್ಞೆಯೆ ಆಗಿರುವುದರಿಂದ 'ನಿಷಿದ್ಧ' ಎಂದರೂ 'ಹರಿಗೆ ಅಪ್ರಿಯ' ಎಂದರೂ ಒಂದೆ ಅರ್ಥ. ಈ ಆಕ್ಷೇಪ ಸಮಾಧಾನ ಗಳೆರಡೂ 'ದಾನವ ಕುಲವೈರಿ ಶ್ರೀನಿವಾಸ' ಎಂಬ ಮಾತಿನಲ್ಲಿಯೇ ಅಡಗಿದೆ. 'ಶ್ರೀನಿವಾಸ' ಎಂದರೆ 'ಋಕ್‌ಸಾಮಾನಿಯಜೂಂಷಿ

ಸಾಹಿ ಶ್ರೀರಮ್ಯಶಾಸತಾಂ' ಎಂಬಂತೆ ವಿಧಿ ನಿಷೇಧ ರೂಪದ ಸಮಸ್ತವೇದಗಳಿಗೆ ಆಶ್ರಯ ಎಂದೆ ಅರ್ಥ,

ಶ್ರೀನಿವಾಸನಿಗೆ ಅಪ್ರಿಯ ಎಂದರೆ ವೇದ ನಿಷಿದ್ಧ ಎಂದೆ ಅರ್ಥ.

ಏಳನೆಯದಾದ ಏಕತಾಳದಲ್ಲಿ ಮುಕ್ತಿದಾಯಕನಾದ ಶ್ರೀಪತಿಯಲ್ಲಿ ಮುಕ್ತಿಯನ್ನೇ ಬೇಡುವುದು ಜಾಣತನ ಎಂದು ದಾಸರು ಉಪದೇಶಿಸಿದ್ದಾರೆ. ಐಹಿಕ ಸುಖಭೋಗಗಳನ್ನು ಬೇಡಿದರೆ ಅದು ಹೆಡ್ಡತನವಾಗುತ್ತದೆ. ಹರಿಯ ಅನುಪಮ ಔದಾರ್ಯಕ್ಕೆ ಅವಮಾನ ಮಾಡಿದಂತೆಯೂ ಆಗುತ್ತದೆ. ಆದ್ದರಿಂದ ಧಿಯೋ ಯೋನಃ ಪ್ರಚೋದಯಾತ್' ಎಂದು ಧ್ಯಾನಿಸುತ್ತ ಸಾವಿಲ್ಲದ ಮುಕುತಿ ಪಥ ತೋರಿಸೆಂದು ಬೇಡಬೇಕು. 'ಅಗ್ನೇನಯ ಸುಪಥಾರಾಯೇ ಅಸ್ಮಾನ್' ಎನ್ನುತ್ತ ಮುಕುತಿ ಪಥದಲ್ಲಿ ನನ್ನನ್ನು ನಡೆಸೆಂದು ಬೇಡಬೇಕು.

ನೋವಿಲ್ಲದ ಸುಖ ಬೇಕಾಗಿದ್ದರೆ ಮನ್ಮಥನನ್ನು ಆಶ್ರಯಿಸ ಕೂಡದು. ಅವನ ತಂದೆಯನ್ನಾಶ್ರಯಿಸಬೇಕು, ಮೋಕ್ಷ ಪಡೆಯಬೇಕು.

'ವಿಮುಕ್ತಿ ಪಾದಪಚ್ಛಾಯಾಮೃತೇ ಕುತ್ರ ಸುಖಂ ನೃಣಾಂ ।
ವಾಸುದೇವಮನಾರಾಧ್ಯತ್ ಕೋ ಮೋಕ್ಷಂ ಸಮವಾಪ್ನುಯಾತ್ ॥

ಮೋಕ್ಷವೆಂಬ ವೃಕ್ಷದ ನೆರಳನ್ನು ಬಿಟ್ಟರೆ ಇನ್ನೆಲ್ಲಿ ಮಾನ

ವರಿಗೆ ಸುಖ ? ವಾಸುದೇವನನ್ನಾರಾಧಿಸದೆ ಯಾರು ಮೋಕ್ಷ ಹೊಂದಬಲ್ಲ ?

ವೇಂಕಟಪತಿಯ ಪಾದಗಳನ್ನು ಹೊರತು ಇನ್ನಾವುದನ್ನು ಆಶ್ರಯಿಸಿದರೂ ಸಂಸಾರದ ಭಯ ನಿವಾರಣೆಯಾಗದು.

ವ್ಯಮಿಂದ್ರಿಯಾದಿಕಂ ಪ್ರೋಕ್ತಂ
ವ್ಯಂಗಭೂತಂ ಹರೌಯತಃ ।
ಕಟಸ್ತು ಸಮುದಾಯೋಕ್ತೋ
ವ್ಯಂಕಟಶ್ಚೇಂದ್ರಿಯಾಗಣಾಃ ॥

ಸ್ವಸ್ಮಿನ್ ಪ್ರೇರಯತೇ ಯಸ್ಮಾತ್
ತಸ್ಮಾದ್ ವ್ಯಂಕಟನಾಯಕಃ ।
ವಿಷಯೇಷ್ವೇವ ವಾನಿತ್ಯಂ
ವ್ಯಂಕಟೇಶ ಉದಾಹೃತಃ ॥

'ವೇಂಕಟ'ವೆಂಬುದು 'ವ್ಯಂಕಟ' ಎಂಬುದರ ರೂಪಾಂತರ. ವ್ಯಂಕಟ ಎಂದರೆ ಇಂದ್ರಿಯಗಳ ಸಮೂಹ. ವ್ಯಂ ಅಂದರೆ ವ್ಯಂಗ, ಶ್ರೀಹರಿಗೆ ವಿಮುಖವಾಗಿರುವ ಇಂದ್ರಿಯಗಳು. ಕಟ ಅಂದರೆ ಸಮೂಹ. ಶ್ರೀಹರಿ ಒಲಿದರೆ ನಮ್ಮ ಇಂದ್ರಿಯಗಳನ್ನು ತನ್ನೆಡೆಗೆ ಹರಿಸಬಲ್ಲ ಮುನಿದರೆ ವಿಷಯಗಳಲ್ಲಿಯೆ ಸಿಲುಕಿಸಿ ನಮ್ಮನ್ನೂ ಅವುಗಳಲ್ಲಿಯೆ ಹೊರಳಾಡಿಸಬಲ್ಲ. ಆದ್ದರಿಂದ ವ್ಯಂಕಟನಾಯಕ, ವ್ಯಂಕಟೇಶ ಎಂದೆಲ್ಲ ಹೆಸರುಗಳು ಬಂದಿವೆ ಎಂದು ಗರುಡ ಪುರಾಣ ಹೇಳಿದೆ.

ಸಂಸಾರದ ಬಂಧನವಿರುವುದೆ ಶ್ರೀಹರಿಯ ಇಚ್ಛೆಯಿಂದ. ಅದು ತೊಲಗುವುದೂ ಅವನಿಚ್ಛೆಯಿಂದ.

'ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ ।'

ಎಂಟನೆಯದಾದ ಏಕತಾಳದಲ್ಲಿ ಹೀನ ಫಲದಾನೆ ಸಲ್ಲದು ಎಂದು ರಾಜರು ಎಚ್ಚರ ನೀಡಿದ್ದಾರೆ. ಬಹುಶ್ರಮದಿಂದ ದಿಲ್ಲಿಯ ಚಕ್ರವರ್ತಿಯನ್ನು ಸಂದರ್ಶನ ಮಾಡಿ ಅವನಲ್ಲಿ ಹುಲ್ಲು ಬೇಡಬಹುದೆ ?

'ಈಶ್ವರಾತ್ ಕ್ಷೀಣಪುಣ್ಯೇನ ಪುಲಕಾಂಶ್ಚ ಯಥಾಧಾನಃ'

'ಅದೃಷ್ಟಹೀನತೆಯಿಂದ ದರಿದ್ರನು ಶ್ರೀಮಂತನಲ್ಲಿ ಹುಲ್ಲು ಬೇಡುವನು? ಅನುಪಮ ಸಂಪತ್ತನ್ನೆ ಬೇಡಿ ಪಡೆಯುವ ಅವಕಾಶ ದೊರೆತಾಗ ಅದನ್ನು ಉಪಯೋಗಿಸಿಕೊಳ್ಳದಿದ್ದರೆ ತಪ್ಪು ಯಾರದು ?

'ಕೌಪೀನಾಚ್ಛಾದನಪ್ರಾಯಾ
ವಾಂಛಾ ಕಲ್ಪದ್ರುಮಾದಪಿ ।
ಜಾಯತೇ ಯದಪುಣ್ಯಾನಾಂ
ಸೋಽಪರಾಧಃ ಸ್ವದೋಷಜಃ ॥'

ಕಲ್ಪವೃಕ್ಷ ಕಣ್ಣೆದುರು ಬಂದು ನಿಂತಾಗಲೂ ಅದೃಷ್ಟ ಹೀನನೊಬ್ಬ ಲಂಗೋಟಿಯನ್ನು ಬೇಡಿದರೆ ತಪ್ಪು ಅವನದೇ.

ಹಾಗೆಯೆ ಲಕುಮಿ ವಲ್ಲಭನಲ್ಲಿ ಹೀನಫಲವನ್ನು ಬೇಡ

ಲ್ಲಗದು. ತಲೆಯೂರಿ ತಪಸ್ಸುಮಾಡಿ ಅವನನ್ನು ಒಲಿಸಿ ಕೊಳ್ಳುವ ಶಕ್ತಿ ಉಳ್ಳವರು ಆವಕ್ಕೆ ಸರಿಯಾದ ಯೋಗ್ಯವಾದ ಉತ್ತಮ ಧ್ಯೇಯವನ್ನೆ ಸಾಧಿಸಿಕೊಳ್ಳಬೇಕು. ಹೀನಜನರ ಎಂಜಲಿಗೆ ಕೈಯೊಡ್ಡಿ ಹೊಟ್ಟೆ ಹೊರೆದುಕೊಳ್ಳುವವರನ್ನು ನೋಡಿ ನಾವು ಪಾಠಕಲಿಯಬೇಕು. ಲಕುಮಿವಲ್ಲಭನಲ್ಲಿಯ ಬೇಡಬೇಕು, ಮಾತ್ರವಲ್ಲ, ಲಕುಮಿವಲ್ಲಭನನ್ನೆ ಬಯಸಬೇಕು. ನೀನೆ ನನಗೆ ಬೇಕು' ಎನ್ನಬೇಕು. ಎಂಥ ನೊಗಸುಗಾರ ನಮ್ಮ ಚೆಲುವ ಹಯವದನ ! ಕಂಡವರೆ ಬಲ್ಲರು ಅವನ ಚೆಲುವನ್ನು. ಅವರ ಮುಂದೆ ಐಹಿಕ ಭೋಗ ಭಾಗ್ಯವೆಲ್ಲ ಹುಲ್ಲುಕಡ್ಡಿಗೆ ಸಮಾನ. ಹುಲ್ಲಿಗಾಗಿ ಬಾಯಿ ಬಿಟ್ಟು ಅಲ್ಲಲ್ಲಿ ತಿರುಗಿದರೆ ಏನು ಸಿಗುತ್ತದೆ ?

'ಪರಿಭ್ರಮಂಸ್ತತ್ರ ನ ವಿಂದತೇಽರ್ಥಾನ್'

ಒಂಬತ್ತನೆಯದಾದ ಅಟ್ಟತಾಳದಲ್ಲಿ ವೇಂಕಟೇಶನು ಕಾಮಿತಾರ್ಥವನ್ನು ಕೊಡುವುದರಲ್ಲಿ ಸಂಶಯ ಪಡುವುದು ಸಲ್ಲದು ಎಂದು ರಾಜರು ಎಚ್ಚರಿಸುತ್ತಾರೆ. ವೆಂಕಟೇಶನಲ್ಲಿ ಮೋಕ್ಷವನ್ನು ಏಕೆ ಬೇಡಬೇಕು. ಬೇಡಿದರೆ ಅವನು ಕೊಡು ವುದರಲ್ಲಿ ಭಾವನೆ ಏನು ? ಅದಕ್ಕಿಂತ ಪ್ರತಿಯೊಬ್ಬರೂ ಸ್ವತಃ ಶ್ರೀನಿವಾಸರೆ ಆಗಬಾರದೇಕೆ ? ವಸ್ತುತಃ ನಮಗೂ ಅವನಿಗೂ ಭೇದವಿಲ್ಲ. ಒಂದೆ ಆತ್ಮ, ದೇಹವೆರಡು. ಅವನು ಶ್ರೀನಿವಾಸ ನಾಗಿ ಮೆರೆಯುತ್ತಿದ್ದಾನೆ. ನಾವು ಮಾತ್ರ ತಿಳಿಯದೆ ಹೀನ ಮಾನವರೆಂದು ಭ್ರಮಿಸಿ ಹಾಗೇ ಆಗಿಬಿಟ್ಟದ್ದೇವೆ. ಕುರಿ ಮಂದೆಯಲ್ಲಿ ಸೇರಿಹೋದ ಒಂದು ಸಿಂಹದ ಮರಿ ತಾನೂ ಕುರಿ ಮರಿ ಎಂದೆ ಭಾವಿಸಿ ಹಾಗೇ ವರ್ತಿಸುತ್ತಿತ್ತು. ಒಮ್ಮೆ ಒಂದು

ಸಿಂಹ ಬಂದು ಗರ್ಜಿಸಿದಾಗ ತಾನೂ ಹಾಗೇ ಗರ್ಜಿಸಿ ನೋಡಿ ಹೌದು ತಾನೂ ಒಂದು ಸಿಂಹವೆ ಎಂದು ಅರಿತುಕೊಂಡಿತು. ಹಾಗೇ ಶ್ರೀನಿವಾಸನ ವೈಭವ ವಿಲಾಸಗಳನ್ನು ಕಂಡು ಬೆರಗಾಗಿ ತಲೆಬಾಗಿ ಅವನ ದಾಸರಾಗಬಾರದು. ನಾವೂ ಶ್ರೀನಿವಾಸರೆ ಆಗಬೇಕು."—ಇದು ಪೌಂಡ್ರಕವಾಸುದೇವನ ವಾದದ ಸರಣಿ. ಬಹು ಅಪಾಯಕಾರಿ. ಈ ಪೌಂಡ್ರಕನು ವಸುದೇವನಿಂದ ಕಾಶೀರಾಜನ ಮಗಳಲ್ಲಿ ಹುಟ್ಟಿದವನು. ವಿವಾಹಕಾಲದಲ್ಲಿ ಮಾಡಿಕೊಂಡ ಕರಾರಿನಂತೆ ಹುಟ್ಟಿದ ಮಗು ಪೌಂಡ್ರಕನನ್ನು ಮಾವನಾದ ಕಾಶೀರಾಜನಿಗೇ ಕೊಟ್ಟಿದ್ದನು, ವಸುದೇವ. ಮುಂದೆ ಆತ ದೇವಕಿ ಮುಂತಾದ ದೇವಕ ರಾಜಪುತ್ರಿಯರನ್ನು ಮದುವೆಯಾದ. ದೇವಕಿಯ ವಿವಾಹ ಕಾಲದಲ್ಲಿ ಅವಳ ಎಂಟನೆಯ ಮಗನಿಂದ ನಿನಗೆ ಮೃತ್ಯು ಎಂದು ಅಶರೀರವಾಣಿ ನುಡಿದುದನ್ನು ಅಣ್ಣ ಕಂಸನು ಕೇಳಿ ದಂಪತಿಗಳನ್ನು ಕಾರಾಗೃಹದಲ್ಲಿಟ್ಟ. ಇದರಿಂದ ಕಾಶೀರಾಜನ ಮಗಳನ್ನು ಕರೆಸಿಕೊಳ್ಳಲು ವಸುದೇವನಿಗೆ ಅವಕಾಶವಿಲ್ಲದಂತಾಯಿತು. ತಾಯಿ ಮಕ್ಕಳನ್ನು ವಸುದೇವ ಮರೆತೇಬಿಟ್ಟನೆಂದು ಅನ್ಯಥಾ ತಿಳಿದು ಪೌಂಡ್ರಕನು ಯಾದವ ಕುಲವನ್ನೆ ದ್ವೇಷಿಸತೊಡಗಿದ. ಅವನ ತಾಯಿ ಪೂರ್ವಜನ್ಮದಲ್ಲಿ ದಿತಿ, ದೈತ್ಯರನ್ನು ಹಡೆದ ತಾಯಿ. ಈತನೂ ಪೂರ್ವಜನ್ಮದಲ್ಲಿ ವೇನನೆಂಬ ದುಷ್ಟರಾಜ. ಆದ್ದರಿಂದ ಸ್ವಾಭಾವಿಕವಾಗಿಯೆ ಕೃಷ್ಣನನ್ನು ದ್ವೇಷಿಸಿದ, ಪೌಂಡ್ರಕ ವೇನನಂತೆಯೆ ತಾನೆ ಪರಬ್ರಹ್ಮ ವಾಸುದೇವನೆಂದ. "ಕೃಷ್ಣನೂ ವಸುದೇವನ ಮಗನಾದುದರಿಂದ 'ವಾಸುದೇವ'ನೆಂದೂ 'ಪರಬ್ರಹ್ಮ ನಾರಾಯಣ'ನೆಂದೂ ಜನ ಭ್ರಮಿಸಿದ್ದಾರೆ ಅವನೂ ನಾರಾಯಣನಂತೆ ಶಂಖಚಕ್ರಾದಿಗಳನ್ನು ಧರಿಸಿ ಜನರನ್ನು

ವಂಚಿಸುತ್ತಿದ್ದಾನೆ. ಆಬಾಲ ಸ್ತ್ರೀ ವೃದ್ಧರನ್ನು ವಧಿಸುತ್ತ ತಾನೆ ವೀರನೆಂದು ಹೊಗಳಿಸಿಕೊಳ್ಳುತ್ತಿದ್ದಾನೆ. ನಿಜವಾಗಿಯೂ ಶಂಖಚಕ್ರಧಾರಿ ಪರಮ ಪ್ರತಾಪಿ ಪರಬ್ರಹ್ಮ ನಾರಾಯಣನು ನಾನೆ" ಎಂದು ಹೇಳಿಕೊಳ್ಳುತ್ತ ಶಂಖಚಕ್ರಾದಿಗಳನ್ನು ಧರಿಸಿ ಶ್ರೀಕೃಷ್ಣನನ್ನು ಯುದ್ಧಕ್ಕೆ ಆಹ್ವಾನಿಸಿದ. ಆಗ ಕೃಷ್ಣ ಚಕ್ರ ದಿಂದ ಅವನ ಶಿರಚ್ಛೇದವಾಯಿತು ಎಂದು ಕಥೆ ಇದೆ. ಇಂಥ ಪೌಂಡ್ರಕನ ಮತವನ್ನು ಮೆಚ್ಚಿ ತಾನೆ ಹರಿ ಎಂದು ಉಪಾಸನೆ ಮಾಡಕೂಡದು. ಅದರಿಂದ ಅನರ್ಥವಿದೆ. ವಿಚಿತ್ರಲೀಲೆಗಳನ್ನು ತೋರುವ ಮಹಾಮಹಿಮನಾದ ಹಯವದನನನ್ನು ಸರ್ವೋ ತ್ತಮನೆಂದು ನಂಬಿ ಆರಾಧಿಸಬೇಕು. ದೇಶದ ಮೂಲೆ ಮೂಲೆ ಗಳಿಂದ ಭಕ್ತಜನರು ಕಾಯಕ್ಲೇಶವನ್ನು ಲೆಕ್ಕಿಸದೆ ಗೋವಿಂದ ಎನ್ನುತ್ತ ಸ್ತೋತ್ರ ಪದಗಳನ್ನು ಹಾಡುತ್ತ ಯಾತ್ರೆ ಮಾಡಿ ಬೆಟ್ಟಹತ್ತಿ ವೆಂಕಟೇಶನ ದಿವ್ಯವಿಗ್ರಹವನ್ನು ಕಣ್ತುಂಬ ನೋಡಿ ಆನಂದಿಸುತ್ತಾರೆ, ಬಯಸಿದುದನ್ನೆಲ್ಲ ಬೇಡಿ ಪಡೆದು ಧನ್ಯ ರಾಗುತ್ತಾರೆ. ಅವರನ್ನು ನೋಡಿ ನಾವು ಕಲಿಯಬೇಕು. ಭಗವಂತನ ಹಿರಿಮೆಯಲ್ಲಿ ನಂಬಿಕೆ ಇಡಬೇಕು.

ಹತ್ತನೆಯದಾದ ರೂಪಕತಾಳದಲ್ಲಿ ಶ್ರೀಹರಿ ಭಕ್ತರನ್ನು ನು ಗ್ರಹಿಸುವನೆಂಬುದನ್ನು ದೃಷ್ಟಾಂತಗಳಿಂದ ಸಮರ್ಥಿಸಲಾಗಿದೆ. ಹನುಮಂತನು ಶ್ರೀರಾಮನಿಗೆ ತನ್ನನ್ನೆ ಸಮರ್ಪಿಸಿಕೊಂಡವನು. ಅವನ ಬಲಗೈ ಬಂಟನಾಗಿ ಅನುಪಮ ಸೇವೆ ಸಲ್ಲಿಸಿ ಪ್ರತಿಯಾಗಿ ಏನನ್ನೂ ಸ್ವೀಕರಿಸಲು ಒಲ್ಲದವನು. ಶ್ರೀರಾಮನು ಅವನಿಗೆ ಎಂಥ ಐಶ್ವರ್ಯವನ್ನೂ ಕೊಡಲು ಸಿದ್ಧನಿದ್ದ. ರಾಮರಾಜ್ಯದಲ್ಲಿ ರಾಮನ ಬೊಕ್ಕಸದಲ್ಲಿ ಕೊರತೆ ಎಂಬುದಿದ್ದೀತೆ ? ಆದರೆ

ಹನುಮಂತನೇನೂ ಬಯಸಲಿಲ್ಲ. ಶ್ರೀರಾಮನು ಅವನನ್ನಾಲಿಂಗಿಸಿ ಅವನಿಗೆ ತನ್ನನ್ನೆ ಬಹುಮಾನವಾಗಿತ್ತ. ಮುಂದೆ ಆದರಿಂದ ಸತ್ಯಲೋಕಾಧಿಪತ್ಯ ಮೋಕ್ಷ ಸಾಮ್ರಾಜ್ಯಗಳೂ ಅವನಿಗೆ ಕರಗತವಾದುವು. ಆನಂದಮಯನಾದ ಶ್ರೀಹರಿಯನ್ನು ಸ್ತ್ರೀ ರೂಪದಿಂದ ಆಲಿಂಗಿಸಿಕೊಂಡು ಅಸದೃಶ ಆನಂದವನ್ನು ನಿತ್ಯ ಪಡೆಯುವ ಭಾಗ್ಯವೂ ಅವನದಾಯಿತು.

'ತೇನೈವ ಕ್ರೀಡತೇ ನಿತ್ಯಂ ಸ್ತ್ರೀರೂಪೋ ಮಿಥುನೀ ಭವೇತ್'

ಪ್ರಹ್ಲಾದನೂ ಶಿಶುವಾಗಿರುವಾಗಲೆ ಕೃಷ್ಣಗ್ರಹಗೃಹೀತಾತ್ಮನಾದ ಮಹಾಭಕ್ತ. ಸಾಕ್ಷಾತ್ ನರಸಿಂಹನು ಪ್ರೈದೋರಿ 'ನೀನು ಬಯಸಿದುದನ್ನೆಲ್ಲ ಕೊಡುವೆನು, ಕೇಳು' ಎಂದಾಗ ನನ್ನೆದೆ ಯಲ್ಲಿ ಬಯಕೆಗಳೇ ಮೂಡದಂತೆ ಮಾಡು. ಅಜ್ಞ ಜನರು ವಿಷಯ ಪದಾರ್ಥಗಳಲ್ಲಿ ಇಡುವ ಪ್ರೀತಿ ನನಗೆ ನಿನ್ನಲ್ಲಿ ಸ್ಥಿರ ವಾಗಿ ನಿಲ್ಲಲಿ' ಎಂದು ಬೇಡಿದನಂತೆ. ಅವನಿಗೆ ಇಹದಲ್ಲಿ ಒಂದು ಮನ್ವಂತರ ಕಾಲ ದೈತ್ಯ ಚಕ್ರವರ್ತಿ ಪದವಿ ಜೊತೆಗೆ ಸದಾ ವಾಮನ ಮೂರ್ತಿಯ ಪ್ರತ್ಯಕ್ಷ ದರ್ಶನ. ಕೊನೆಯಲ್ಲಿ ಮುಕ್ತಿ ಕರಗತವಾಯಿತು. ಕಾಡಿನಲ್ಲಿ ನಿರಂತರ ತಪಸ್ಸು ಮಾಡಿ ಹರಿಯನ್ನೊಲಿಸಿಕೊಂಡು ಬೇಕಾದ ಅಭೀಷ್ಟ ಗಳನ್ನು ಪಡೆದ ಋಷಿಮುನಿಗಳು ಹಿಂದೆ ಎಷ್ಟೋ ಮಂದಿ ಆಗಿ ಹೋಗಿದ್ದಾರೆ. ಈ ದೃಷ್ಟಾಂತಗಳನ್ನು ಕಂಡು ಶ್ರೀಹರಿಯ ಭಕ್ತವಾತ್ಸಲ್ಯ, ಶಕ್ತಿ, ಔದಾರ್ಯಗಳ ವಿಷಯದಲ್ಲಿ ಭ್ರಾಂತಿ ಅವಿಶ್ವಾಸಗಳೇನಿದ್ದರೂ ಅವನ್ನು ತೊರೆಯಬೇಕು. ಅವನ ಪಾದಕಮಲಗಳನ್ನು ನಂಬಿ ಸುಖಿಯಾಗಬೇಕು.

ಹನ್ನೊಂದನೆಯದು ಜತೆ. ಸೂಳಾದಿಯಲ್ಲಿ ಹೇಳಿದು ದನ್ನೆಲ್ಲ ಕೊನೆಗೆ ಸಂಕ್ಷೇಪವಾಗಿ ಒಂದು ಮಾತಿನಿಂದ ಇಲ್ಲಿ ಹೇಳಿದ್ದಾರೆ, ರಾಜರು. ಗಿರಿಯ ತಿಮ್ಮರಾಯನ ಚರಣಗಳನ್ನು ಕಂಡೆ ಎಂದು ಉಪಕ್ರಮಿಸಿ ಕಾಣುವ ಬಗೆಯನ್ನು ವಿಸ್ತಾರವಾಗಿ ಬಣ್ಣಿಸಿ ಈಗ ಅವನ ಆ ಚರಣಗಳೆ ಗತಿ ಎಂದು ನಂಬು ಶರಣಾಗತನಾಗು ಎಂದು ಉಪದೇಶಿಸಿದ್ದಾರೆ.

'ರಕ್ಷತೀತ್ಯೇವ ವಿಶ್ವಾಸಸ್ತದೀಯೋಽಹಮಿತಿ ಸ್ಮೃತಿಃ।
ಶರಣಾಗತಿರಿತ್ಯೇಷಾ ವಿಷ್ಣೌ ಮೋಕ್ಷ ಫಲಪ್ರದಾ !'

ಶ್ರೀಹರಿ ತನ್ನನ್ನು ರಕ್ಷಿಸುತ್ತಾನೆ ಎಂಬ ವಿಶ್ವಾಸ, ತಾನು ಅವನ ಪ್ರೀತಿ ಪಾತ್ರನಾದ ಕಿಂಕರ ಎಂಬ ಪ್ರಜ್ಞೆ ಇವೆರಡು ಸೇರಿ ಶರಣಾಗತಿ ಎನಿಸುತ್ತದೆ. ಇದು ಮೋಕ್ಷ ಫಲದಾಯಕವಾಗುತ್ತದೆ.

ಮನ್ಮನೋಭೀಷ್ಟವರದಂ ಸರ್ವಾಭೀಷ್ಟಫಲಪ್ರದಂ ।
ಪುರಂದರಗುರುಂ ವಂದೇ ದಾಸಶ್ರೇಷ್ಠಂ ದಯಾನಿಧಿಂ



## ತತ್ವವಾದಕ್ಕೆ ಚಂದಾದಾರರಾಗಿರಿ

| | | |
|---|---|---|
| ವಾರ್ಷಿಕ ಚಂದಾ | ರೂ. | 12-00 |
| ಆಜೀವ ಸದಸ್ಯರು | ರೂ | 150-00 |
| ಪೋಷಕರು | ರೂ | 1000 |

ವಿಶೇಷಾಂಕದ ಕಲವೇ ಪ್ರತಿಗಳು ಉಳಿದಿವೆ

| | | |
|---|---|---|
| "ತತ್ವಮಂಜರೀ" | ರೂ | 15-00 |
| ಉಪಾಯನ | ರೂ | 6-00 |

**ಅಂಚೆ ವೆಚ್ಚ ಪ್ರತ್ಯೇಕ**

ತತ್ವವಾದ ಮಾಲೆಯಲ್ಲಿ ಅರಳಿದ ಕುಸುಮಗಳು

* ಬ್ರಹ್ಮಸೂತ್ರಗಳ ಅಂತರಂಗ
* ಮಹಾಭಾರತದ ಬೆಳಕು.
* ವಿಶ್ವೇಶವಾಣಿ.
* ಪೂರ್ಣಪ್ರಜ್ಞ ಭಾರತೀ
* ಶ್ರೀಹರೇ ವೇಂಕಟ

ತ ತ್ವ ವಾ ದ ಕಾ ರ್ಯಾ ಲ ಯ
ಪೂರ್ಣಪ್ರಜ್ಞ ವಿದ್ಯಾಪೀಠ
ಕತ್ರಿಗುಪ್ಪೆ ರಸ್ತೆ, ಬೆಂಗಳೂರು-28.